CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜುಲೈ ೨೨, ೨೦೦೪ (ಆಷಾಢ ೩೧, ಶಕ ವರ್ಷ ೧೯೨೬) | ಸಂಚಿಕೆ ೩೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಾರಿಗೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಾರಿಇ 05 ಸಾಇಸೇ 2004, ಬೆಂಗಳೂರು, ದಿನಾಂಕ: 26ನೇ ಜೂನ್ 2004**

ದಿನಾಂಕ: 22.05.2002 ರಂದು ಮಾನ್ಯ ಲೋಕಾಯುಕ್ತರು ಪ್ರಾದೇಶಿಕ ಸಾರಿಗೆ ಅಧಿಕಾರಿ ಕಛೇರಿ, ಬೆಂಗಳೂರು ದಕ್ಷಿಣ ಇಲ್ಲಿ ದಾಳಿ ನಡೆಸಿ ಶೋಧನೆ ಮಾಡಿದ ಸಂದರ್ಭದಲ್ಲಿ ಸಲ್ಲಿಸಿರುವ ವರದಿಯ ಹಿನ್ನಲೆಯಲ್ಲಿ ಸಾರಿಗೆ ಆಯುಕ್ತರು ದಿನಾಂಕ: 05.06.2002ರ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಸಾಅ/ಸಿಬ್ಬಂದಿ/1/ಸಿಆರ್/17/2002-2003 ರಲ್ಲಿ ಶ್ರೀ ಕೆ.ವಿ. ಪಾಷಾ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಮತ್ತು ದ್ವಿತೀಯ ದರ್ಜೆ ಸಹಾಯಕರುಗಳಾದ ಶ್ರೀ ಜಿ.ಆರ್. ದಿವಾಕರ್, ಶ್ರೀ ಗಂಗರಾಮಯ್ಯ, ಶ್ರೀ ಎಸ್.ವಿ. ಅರ್ಕಾಚರ್, ಶ್ರೀ ಎಂ.ಪಿ. ನರಸಿಂಹಮೂರ್ತಿ, ಹಾಗೂ ಪ್ರಥಮ ದರ್ಜೆ ಸಹಾಯಕರುಗಳಾದ ಶ್ರೀ ಪರಶಿವ ಮೂರ್ತಿ, ಇವರುಗಳನ್ನು ಅಮಾನತ್ತುಗೊಳಿಸುತ್ತಾರೆ.

ಸರ್ಕಾರದ ಆದೇಶ ಸಂಖ್ಯೆ: ಒಸಾಇ 99 ಟಿಆರ್ಇ 2002, ದಿನಾಂಕ: 21.06.2003 ರಲ್ಲಿ ಸದರಿ ನೌಕರರು ಮಾನ್ಯ ಲೋಕಾಯುಕ್ತರು ತೆಗೆದುಕೊಳ್ಳಬಹುದಾದ ಯಾವುದೇ ಕ್ರಮ, ಮಾನ್ಯ ನ್ಯಾಯಾಲಯಗಳು ನೀಡಬಹುದಾದಂತಹ ತೀರ್ಪನ್ನು ಅನುಷ್ಠಾನಗೊಳಿಸಿದ ಹಾಗೂ ಸದರಿಯವರ ವಿರುದ್ಧ ಇಲಾಖೆಯು ಕೈಗೊಳ್ಳಬಹುದಾದ ಶಿಸ್ತು ಕ್ರಮವನ್ನು ಕಾಯ್ದಿರಿಸಿ ಸದರಿ ನೌಕರರ ಅಮಾನತ್ತಿನ ಆದೇಶವನ್ನು ತೆರವುಗೊಳಿಸಿ ಪುನರ್ ನೇಮಕ ಮಾಡಲಾಗಿದೆ.

ಸರ್ಕಾರದ ಪತ್ರ ಸಂಖ್ಯೆ: ಒಸಾಇ 99 ಟಿಆರ್ಇ 2002 (ಭಾಗ-1) ದಿನಾಂಕ: 03.07.2003 ರಲ್ಲಿ ಪುನಃ ಮೇಲ್ಕಂಡ ಅಧಿಕಾರಿ/ನೌಕರರನ್ನು ಎರಡನೇ ಬಾರಿಗೆ ಅಮಾನತ್ತಿನಲ್ಲಿಡಲು ಕ್ರಮ ಕೈಗೊಳ್ಳುವಂತೆ ನಿರ್ದೇಶನವನ್ನು ನೀಡಲಾಗಿತ್ತು. ಅದರನ್ವಯ ಸಾರಿಗೆ ಆಯುಕ್ತರು ದಿನಾಂಕ: 07.07.2003 ರಲ್ಲಿ ಸದರಿ ಅಧಿಕಾರಿ/ನೌಕರರುಗಳನ್ನು ಅಮಾನತ್ತಿನಲ್ಲಿಟ್ಟಿದ್ದಾರೆ.

ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 3684/04ಕ್ಕೆ ಸಂಬಂಧಿಸಿದಂತೆ ನ್ಯಾಯಾಲಯವು ದಿನಾಂಕ: 23.01.2004 ರಲ್ಲಿ ಮಾನ್ಯ ಲೋಕಾಯುಕ್ತರ ದಿನಾಂಕ: 25.04.2003ರ ವರದಿಗೆ ತಡೆಯಾಜ್ಞೆ ನೀಡಿರುತ್ತದೆ.

ಕರ್ನಾಟಕ ಲೋಕಾಯುಕ್ತರು ಪತ್ರ ಸಂಖ್ಯೆ: ಲೋಕ/ಎಆರ್ 2:3;25:2003-2004, ದಿನಾಂಕ: 27.05.2004 ರಲ್ಲಿ ಕರ್ನಾಟಕ ಲೋಕಾಯುಕ್ತರ ವರದಿಯನ್ನು ಕರ್ನಾಟಕ ಉಚ್ಚ ನ್ಯಾಯಾಲಯವು ತಡೆಹಿಡಿದಿರುವುದರಿಂದ ಲೋಕಾಯುಕ್ತರ ವರದಿಯ ಆಧಾರದ ಮೇರೆಗೆ ಸಾರಿಗೆ ಇಲಾಖೆಯ ಅಧಿಕಾರಿ/ನೌಕರರುಗಳನ್ನು ಅಮಾನತ್ತಿನಲ್ಲಿ ಮುಂದುವರಿಸುವುದು ಸೂಕ್ತವಲ್ಲವೆಂದು ಮತ್ತು ಇದನ್ನು ಪರಿಶೀಲಿಸಿ ಅಮಾನತ್ತನ್ನು ತೆರವುಗೊಳಿಸಲು ಸೂಕ್ತ ಕ್ರಮ ತೆಗೆದುಕೊಳ್ಳಲು ಸೂಚಿಸಿರುತ್ತಾರೆ.

ಮೇಲಿನ ಎಲ್ಲಾ ಕ್ರಮಗಳನ್ನು ಪರಿಶೀಲಿಸಿ, ನ್ಯಾಯಾಲಯದ ಮಧ್ಯಂತರ ಆದೇಶದ ಹಿನ್ನಲೆಯಲ್ಲಿ ಶ್ರೀ ಕೆ. ಅನ್ವರ್ ಪಾಷಾ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಇವರನ್ನು ಲೋಕಾಯುಕ್ತರ ವಿಚಾರಣೆಯನ್ನು ಕಾಯ್ದಿರಿಸಿ, ಇವರನ್ನು ಪ್ರಾದೇಶಿಕ ಸಾರಿಗೆ ಕಛೇರಿ, ಹಾಸನ, ಇಲ್ಲಿ ಖಾಲಿ ಇರುವ ಸಹಾಯಕ ಪ್ರಾದೇಶಿಕ ಸಾರಿಗೆ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಲಕ್ಷ್ಮೀಕಾಂತ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

ಪಿ.ಆರ್. 700

**ಕಂದಾಯ ಸಚಿವಾಲಯ**

**ವಿಷಯ:** WP ಸಂಖ್ಯೆ 40732-40733/2001ರಲ್ಲಿ ದಿನಾಂಕ 14.6.2002 ರಂದು ಉಚ್ಛ ನ್ಯಾಯಾಲಯ ನೀಡಿರುವ ತೀರ್ಪಿನಂತೆ ಮಾಜಿ ಅನುವಂಶಿಕ ಪಟೇಲರುಗಳಿಗೆ ಅನುಕಂಪ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. WP ಸಂಖ್ಯೆ 40732-40733/2001, 40727-31/2001 ಮತ್ತು 44654-44661/2001 (KVOA) ರಲ್ಲಿ ದಿನಾಂಕ 14.6.2002 ರಂದು ಘನ ಉಚ್ಛ ನ್ಯಾಯಾಲಯ ನೀಡಿರುವ ತೀರ್ಪು.
2. ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇ ವರ ಪತ್ರ ಸಂಖ್ಯೆ ಹೆಚ್‌ಒಎ/ಸಿಆರ್/21/2001-2002 ದಿನಾಂಕ 30.7.2002
3. ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇ ವರ ಪತ್ರ ಸಂಖ್ಯೆ ಹೆಚ್‌ಒಎ/ಸಿಆರ್/20/2001-2002, ದಿನಾಂಕ 5.10.2002
4. ರಿಟ್ ಅರ್ಜಿದಾರರುಗಳು ಸರ್ಕಾರಕ್ಕೆ ಸಲ್ಲಿಸಿರುವ ಮನವಿಗಳು

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ WP ಸಂಖ್ಯೆ 40732-40733/2001, 40727-31/2001 ಮತ್ತು 44654-66/2001(KVOA) (ಎಸ್ ಸುಬ್ರಾಯಭಟ್ ವಿರುದ್ಧ ರಾಜ್ಯ ಸರ್ಕಾರಗಳನ್ನು ಮಾನ್ಯ ಉಚ್ಛ ನ್ಯಾಯಾಲಯ ದಿನಾಂಕ 14.6.2002 ರಂದು ಇ ತ್ಯರ್ಥಪಡಿಸಿದೆ. ಸದರಿ ಆದೇಶದ ಭಾಗದ ಉಧೃತ ಈ ಕೆಳಕಂಡಂತಿದೆ.

"xxx Therefore, keeping in view the claims and contentions of both parties, it is appropriate that the respondents should be directed to consider and pass orders on the representations made by the petitioners giving reasons therefor.

Accordingly, these writ petitioners are disposed of directing the respondents to consider the claims and contentions raised by the petitioners in their representations and writ petitions and pass orders within a period of three months from the date of the certified copy of this order is received."

ಮೇಲೆ ಓದಲಾದ ಕ್ರಮ ಸಂಖ್ಯೆ (2) ಮತ್ತು (3) ರಂತೆ ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳು ರಿಟ್ ಅರ್ಜಿದಾರರ ಬೇಡಿಕೆಗಳ ಬಗ್ಗೆ ನ್ಯಾಯಾಲಯದ ಆದೇಶದಂತೆ ಸೂಕ್ತ ಆದೇಶ ಹೊರಡಿಸಲು ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪ್ರಕಾರ ಉಚ್ಛ ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ ರಿಟ್ ಅರ್ಜಿದಾರರುಗಳು ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸಿ ರಿಟ್ ಅರ್ಜಿಗೆ ಲಗತ್ತಿಸಲಾದ ಅನುಬಂಧದಲ್ಲಿನ ಬೇಡಿಕೆಗಳನ್ನು ಪರಿಗಣಿಸಲು ಕೋರಿದ್ದಾರೆ. ಸದರಿ ಬೇಡಿಕೆಗಳು ಈ ಕೆಳಕಂಡಂತಿವೆ.

ಅ) WP ಸಂಖ್ಯೆ 33918-919/94 ರಲ್ಲಿ ದಿನಾಂಕ 24.7.97 ರಂದು ಉಚ್ಛ ನ್ಯಾಯಾಲಯ ಮಾಡಿದ ಆದೇಶದ ಪ್ರಕಾರ ಮಾಜಿ ಪಟೇಲರುಗಳಿಗೆ ದಿನಾಂಕ 1.8.84 ರಿಂದ ಮಾಶಾಸನ ಮಂಜೂರು ಮಾಡಲಾಗಿದ್ದು ಈ ದಿನಾಂಕವನ್ನು ಮಾರ್ಪಡಿಸಿ ದಿನಾಂಕ 1.8.79 ರಿಂದ ಮಂಜೂರು ಮಾಡುವುದು.

ಆ) ದಿನಾಂಕ 1.2.63 ರಂದು ಗ್ರಾಮಾಧಿಕಾರಿ ರದ್ದತಿ ಕಾಯ್ದೆ ಜಾರಿಗೆ ಬಂದಿದ್ದರೂ ಸಹ ಮಾಜಿ ಪಟೇಲರು ದಿನಾಂಕ 31.12.77 ರ ವರೆಗೆ ವಾಸ್ತವಿಕವಾಗಿ ಕರ್ತವ್ಯದಲ್ಲಿ ಮುಂದುವರೆದಿರುವುದರಿಂದ ದಿನಾಂಕ 1.2.63 ರ ಬದಲಿಗೆ 31.12.77 ಎಂದು ಪರಿಗಣಿಸುವಂತೆ ಆದೇಶ ನೀಡಬೇಕು.

ಇ ) ಆದಾಯ ಮಿತಿಯನ್ನು ದಿನಾಂಕ 1.1.94 ರಿಂದ ತೆಗೆದು ಹಾಕಿದ್ದು ಇ ದರ ಬದಲಾಗಿ ದಿನಾಂಕ 1.8.79 ರಿಂದಲೇ ಜಾರಿಗೆ ಬಂದಿದೆ ಎಂದು ತಿದ್ದುಪಡಿ ಆದೇಶ ಹೊರಡಿಸುವ ಬಗ್ಗೆ.

ಘನ ಉಚ್ಛ ನ್ಯಾಯಾಲಯವು ನೀಡಿದ ಆದೇಶ ಹಾಗೂ ರಿಟ್ ಅರ್ಜಿದಾರರುಗಳು ಸಲ್ಲಿಸಿರುವ ಮನವಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಪರಿಶೀಲನೆಯ ನಂತರ ರಿಟ್ ಅರ್ಜಿದಾರರು ರಿಟ್ ಅರ್ಜಿಗೆ ಲಗತ್ತಿಸಿದ ಅನುಬಂಧದಲ್ಲಿ ನಮೂದಿಸಿರುವ ಬೇಡಿಕೆಗಳನ್ನು ಈ ಕೆಳಗಿನಂತೆ ಪರಿಗಣಿಸಲಾಗಿದೆ.

1) ಮಾಜಿ ಶ್ಯಾನುಭೋಗರುಗಳಿಗೆ ಅನುಕಂಪ ಭತ್ಯೆಯನ್ನು ದಿನಾಂಕ 1.8.79 ರಿಂದ ರೂ 100.00 ರಂತೆ ಮತ್ತು ದಿನಾಂಕ 1.7.90 ರಿಂದ ರೂ 500.00 ರಂತೆ ನೀಡಲು ಸರ್ಕಾರ ಮಾಡಿದ ಆದೇಶದಂತೆ ಮಾಜಿ ಪಟೇಲರುಗಳಿಗೂ ಸಹ ಈ ಸವಲತ್ತನ್ನು ಮಂಜೂರು ಮಾಡಲು ಕರ್ನಾಟಕ ಉಚ್ಛ ನ್ಯಾಯಾಲಯ WP ಸಂಖ್ಯೆ 33918-919/94 ರಲ್ಲಿ ದಿನಾಂಕ 24.7.97 ರಂದು ತೀರ್ಪು ನೀಡಿದ್ದು, ಈ ತೀರ್ಪನ್ನು ಪ್ರಶ್ನಿಸಿ ಸರ್ಕಾರ WA ಸಂಖ್ಯೆ 6151-52/97 ದಾಖಲಿಸಿತ್ತು. ಸದರಿ ರಿಟ್ ಅಪೀಲುಗಳು ದಿನಾಂಕ 25.2.2002 ರಂದು ಇ ತ್ಯರ್ಥವಾಗಿ WP ಸಂಖ್ಯೆ 33918-919/94 ರಲ್ಲಿ ದಿನಾಂಕ 24.7.97 ರಂದು ಮಾಡಿದ ಆದೇಶವನ್ನು ಉಚ್ಛ ನ್ಯಾಯಾಲಯದ ಖಂಡಪೀಠ ಎತ್ತಿ ಹಿಡಿದಿದೆ. ಉಚ್ಛ ನ್ಯಾಯಾಲಯದ ಖಂಡಪೀಠದ ಈ ಆದೇಶವನ್ನು ಪ್ರಶ್ನಿಸಿ ಸರ್ಕಾರ ಸರ್ವೋಚ್ಛ ನ್ಯಾಯಾಲಯದಲ್ಲಿ SLP ಸಂಖ್ಯೆ 5360-61/2003ನ್ನು ದಾಖಲಿಸಿದೆ. ಈ SLP ಗಳು ಸರ್ವೋಚ್ಛ ನ್ಯಾಯಾಲಯದಲ್ಲಿ ಬಾಕಿ ಇ ರುವುದರಿಂದ ಈ ಹಂತದಲ್ಲಿ ಮನವಿದಾರರ ಕೋರಿಕೆಯನ್ನು ಪರಿಗಣಿಸಲು ಸಾಧ್ಯವಿಲ್ಲ.

2) ಕರ್ನಾಟಕ ಗ್ರಾಮಾಧಿಕಾರಿಗಳ ರದ್ದತಿ ಕಾಯ್ದೆ ದಿನಾಂಕ 1.2.63 ರಿಂದ ಜಾರಿಗೆ ಬಂದಿರುವುದರಿಂದ ಆ ದಿನದಿಂದ ಮಾಜಿ ಗ್ರಾಮಾಧಿಕಾರಿ ಹುದ್ದೆಗಳು ಅಸ್ಥಿತ್ವ ಕಳೆದುಕೊಂಡಿರುವುದರಿಂದ ಆ ಹುದ್ದೆಗಳು 31.12.77 ರ ವರೆಗೆ ಮುಂದುವರೆದಿದೆ ಎಂದು ಭಾವಿಸಲು ಕೋರಿರುವ ಬೇಡಿಕೆಯನ್ನು ಪರಿಗಣಿಸಲು ಬರುವುದಿಲ್ಲ. ಆದುದರಿಂದ ದಿನಾಂಕ 1.2.63 ರ ಬದಲಾಗಿ 31.12.77 ಎಂದು ಮಾರ್ಪಡಿಸಲು ಸಾಧ್ಯವಿಲ್ಲ.

3) ಅನುಕಂಪ ಭತ್ಯೆ ಪಡೆಯಲು ಅರ್ಹರಾಗಲು ಆದಾಯ ಮಿತಿ ನಿಗದಿಪಡಿಸಿದ್ದು ಈ ಷರತ್ತನ್ನು ಮಾಜಿ ಪಟೇಲರುಗಳ ವಿಷಯದಲ್ಲಿ ದಿನಾಂಕ1.1.94ರಿಂದ ತೆಗೆದು ಹಾಕಲಾಗಿದೆ. ಮಾಜಿ ಶ್ಯಾನುಭೋಗರುಗಳಿಗೆ ಮಾಹೆಯಾನ ರೂ 500.00 ದಿನಾಂಕ 1.7.90 ರಿಂದ ಕೊಡಲಾಗುತ್ತಿದ್ದಂತೆ ಮಾಜಿ ಪಟೇಲರುಗಳಿಗೂ ಸಹ 1.7.90 ರಿಂದ ಮಾಹೆ ರೂ 500.00 ರೂ ಕೊಡುವಂತೆ ಉಚ್ಛ ನ್ಯಾಯಾಲಯ WP ಸಂಖ್ಯೆ 33918-919/94 ರಲ್ಲಿ ದಿನಾಂಕ 24.7.97 ರಂದು ನೀಡಿದ ತೀರ್ಪಿನ್ನು WA 6151-52/97 ರಲ್ಲಿ ಪ್ರಶ್ನಿಸಿದ್ದು ಈ WA ನಲ್ಲಿ ದಿನಾಂಕ 25.2.2002 ರ ಆದೇಶವನ್ನು SLP ದಾಖಲಿಸುವ ಮೂಲಕ ಸರ್ವೋಚ್ಛ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗಿದೆ. ಈ SLP ನ್ಯಾಯಾಲಯದಲ್ಲಿ ಬಾಕಿ ಇ ದೆ. ಆದಾಗ್ಯೂ ರಿಟ್ ಅರ್ಜಿದಾರರ ಕೋರಿಕೆಯ ಪ್ರಕಾರ ಆದಾಯ ಮಿತಿಯನ್ನು ದಿನಾಂಕ 1.1.94 ರ ಬದಲು ದಿನಾಂಕ 1.8.79 ರಿಂದ ತೆಗೆದು ಹಾಕುವ ಯಾವುದೇ ಪ್ರಸ್ತಾವ SLP ಇ ತ್ಯರ್ಥವಾಗುವವರೆಗೆ ಪರಿಗಣಿಸಲು ಸಾಧ್ಯವಿಲ್ಲ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 343 ಎಂಬಿಎಸ್ 2001, ಬೆಂಗಳೂರು ದಿನಾಂಕ: 21ನೇ ಜೂನ್ 2004**

ರಿಟ್ ಅರ್ಜಿದಾರರುಗಳ ಬೇಡಿಕೆಗಳನ್ನು ಉಚ್ಛ ನ್ಯಾಯಾಲಯದ WP ಸಂಖ್ಯೆ: 40732-33/2002 ಮತ್ತು ಇ ದಕ್ಕೆ ಹೊಂದಿಕೊಂಡಿರುವ ರಿಟ್ ಅರ್ಜಿಗಳಲ್ಲಿ ದಿನಾಂಕ 14.6.2002 ರಂದು ಮಾಡಿದ ಆದೇಶದ ಅಡಿಯಲ್ಲಿ ಪರಿಶೀಲಿಸಿದ ನಂತರ ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ರಿಟ್ ಅರ್ಜಿದಾರರ ಬೇಡಿಕೆಗಳನ್ನು ಪರಿಗಣಿಸಲು ಸಾಧ್ಯವಿಲ್ಲವೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 698 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇ ಲಾಖೆ (ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 5 ಸೇಇವಿ 2004, ಬೆಂಗಳೂರು, ದಿನಾಂಕ: 19ನೇ ಜೂನ್ 2004**

**ವಿಷಯ:** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10ಕ್ಕೆ ತಿದ್ದುಪಡಿ.

**ಉಲ್ಲೇಖ:**
1. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 13 ಎಸ್‌ಡಿಇ 85, ದಿನಾಂಕ 3.7.1985.
2. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 24 ಸೇಇವಿ 88, ದಿನಾಂಕ 6.6.1988.
3. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 16 ಸೇಇವಿ 89, ದಿನಾಂಕ 26.6.1989.
4. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 3 ಎಸ್‌ಡಿಇ 94, ದಿನಾಂಕ 26.2.1994.
5. ಸುತ್ತೋಲೆ ಸಂಖ್ಯೆ: ಸಿಆಸುಇ 16 ಸೇಇವಿ 96, ದಿನಾಂಕ 21.4.1997.
6. ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 2 ಸೇಇವಿ 97, ದಿನಾಂಕ 8.7.1997.
7. ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 3 ಸೇಇವಿ 98, ದಿನಾಂಕ 5.8.1998.
8. ಸುತ್ತೋಲೆ ಸಂಖ್ಯೆ: ಸಿಆಸುಇ 8 ಸೇಇವಿ 2000, ದಿನಾಂಕ 29.8.2000.
9. ಸುತ್ತೋಲೆ ಸಂಖ್ಯೆ: ಸಿಆಸುಇ 8 ಸೇಇವಿ 2000, ದಿನಾಂಕ 29.8.2000.
10. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 4 ಎಸ್‌ಡಿಇ 2000, ದಿನಾಂಕ 15.4.2002.

ಉಲ್ಲೇಖ (1)ರಲ್ಲಿ ನಮೂದಿಸಿರುವ ದಿನಾಂಕ 3.7.85ರ ಅಧಿಕೃತ ಜ್ಞಾಪನದಲ್ಲಿ ಸರ್ಕಾರಿ ನೌಕರರನ್ನು ಯಾವ ಯಾವ ಸಂದರ್ಭಗಳಲ್ಲಿ ಅಮಾನತ್ತಿನಲ್ಲಿ ಇರಿಸಬಹುದು ಎಂಬ ಬಗ್ಗೆ ಹಾಗೂ ತನಿಖೆ/ವಿಚಾರಣೆಯನ್ನು ಬಾಕಿಯಿಟ್ಟು ಈ ಅಮಾನತ್ತನ್ನು ಎಷ್ಟು ಅವಧಿಯವರೆಗೆ ಮುಂದುವರೆಸಬಹುದು ಎಂಬ ಬಗ್ಗೆ ವಿವರಿಸಲಾಗಿದೆ.

2. ಉಲ್ಲೇಖ (2)ರಲ್ಲಿರುವ ದಿನಾಂಕ 6.6.1988ರ ಅಧಿಕೃತ ಜ್ಞಾಪನದಲ್ಲಿ ಶಿಸ್ತು ಪ್ರಾಧಿಕಾರಿಗಳು ಗುರುತರವಾದ ಆಪಾದನೆಗಳಿಲ್ಲದ ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿಟ್ಟು ಆದೇಶ ಹೊರಡಿಸುವ ಮುನ್ನ ದಿನಾಂಕ 3.7.1985ರ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಗಳ ಅಡಿಯಲ್ಲಿ ಪರಿಶೀಲಿಸುವುದರ ಜೊತೆಗೆ ಇಂತಹ ನೌಕರರನ್ನು ಬೇರೆ ಸ್ಥಳಕ್ಕೆ ವರ್ಗಾಯಿಸುವ ಸಾಧ್ಯತೆಯನ್ನು ಪರಿಶೀಲಿಸುವಂತೆ ಸೂಚಿಸಲಾಗಿದೆ.

3. ಉಲ್ಲೇಖ (3)ರಲ್ಲಿರುವ ದಿನಾಂಕ 26.6.1989ರ ಅಧಿಕೃತ ಜ್ಞಾಪನದಲ್ಲಿ ಲಂಚ ನಿರ್ಮೂಲನ ಅಧಿನಿಯಮದ ಅಡಿಯಲ್ಲಿ ಅಥವಾ ಇನ್ನಾವುದೇ ವಿಷಯಕ್ಕೆ ಸಂಬಂಧಿಸಿದಂತೆ ತನಿಖೆಗೆ ಒಳಗಾಗಿರುವ ಸರ್ಕಾರಿ ನೌಕರರನ್ನು ಪೂರ್ಣ ತನಿಖೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿಡುವಂತೆ ಲೋಕಾಯುಕ್ತ, ಇನ್ಸ್‌ಪೆಕ್ಟರ್ ಜನರಲ್‌ರವರಿಂದ ಬರುವ ಶಿಫಾರಸ್ಸುಗಳನ್ನು ಆದ್ಯತೆ ಮೇಲೆ ಪರಿಶೀಲಿಸಿ ಎರಡು ವಾರಗಳೊಳಗಾಗಿ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಶಿಸ್ತು ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ.

4. ಉಲ್ಲೇಖ (4)ರಲ್ಲಿನ ದಿನಾಂಕ 26.2.1994ರ ಅಧಿಕೃತ ಜ್ಞಾಪನದಲ್ಲಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾದ ಸರ್ಕಾರಿ ನೌಕರನ ವಿರುದ್ಧ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ಸೂಚನೆಗಳನ್ನು ನೀಡಲಾಗಿದೆ. ಈ ಅಧಿಕೃತ ಜ್ಞಾಪನದ ಕಂಡಿಕೆ 6ರ ಉಪ ಕಂಡಿಕೆ (3) ಮತ್ತು (4)ರಲ್ಲಿ ಅನಧಿಕೃತ ಗೈರುಹಾಜರಾದ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡುವ ಬಗ್ಗೆ ತಿಳಿಸಲಾಗಿದೆ.

5. ಉಲ್ಲೇಖ (5)ರಲ್ಲಿನ ದಿನಾಂಕ 21.4.1997ರ ಸುತ್ತೋಲೆಯಲ್ಲಿ ಎಲ್ಲಾ ಶಿಸ್ತು ಪ್ರಾಧಿಕಾರಗಳು ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿಡುವ ಹಾಗೂ ಪುನರ್ ನೇಮಕ ಮಾಡುವ ಬಗ್ಗೆ ಸರ್ಕಾರವು ಆಗಿಂದಾಗ್ಗೆ ಹೊರಡಿಸಿರುವ ಸೂಚನೆಗಳನ್ನು ಗಮನದಲ್ಲಿಟ್ಟುಕೊಳ್ಳುವಂತೆ ಸೂಚಿಸಲಾಗಿದೆ.

6. ಉಲ್ಲೇಖ (6)ರಲ್ಲಿನ ದಿನಾಂಕ 8.7.1997ರ ಅಧಿಕೃತ ಜ್ಞಾಪನದಲ್ಲಿ ಸರ್ಕಾರಿ ನೌಕರನ ವಿರುದ್ಧ ಲಂಚ ನಿರೋಧ ಕಾಯ್ದೆ 1988ರ ಅಡಿಯಲ್ಲಿ ಕ್ರಿಮಿನಲ್ ಅಪರಾಧದ ಪ್ರಕರಣ ತನಿಖೆಯಲ್ಲಿ ಅಥವಾ ವಿಚಾರಣೆಯಲ್ಲಿದ್ದಾಗ ಅಂತಹ ನೌಕರನನ್ನು ಅಮಾನತ್ತಿನಲ್ಲಿ ಇಡಬಾರದೆಂದು ಸಕ್ಷಮ ಪ್ರಾಧಿಕಾರವು ಭಾವಿಸಿದಲ್ಲಿ ಯಾವ ರೀತಿಯ ಕ್ರಮ ಕೈಗೊಳ್ಳಬೇಕೆಂದು ಸೂಚನೆಗಳನ್ನು ನೀಡಲಾಗಿದೆ.

7. ಉಲ್ಲೇಖ (7)ರಲ್ಲಿನ ದಿನಾಂಕ 5.8.1998ರ ಅಧಿಕೃತ ಜ್ಞಾಪನ, ಉಲ್ಲೇಖ (8) ಮತ್ತು (9) ರಲ್ಲಿನ ದಿನಾಂಕ: 29.8.2000ರ ಸುತ್ತೋಲೆಯಲ್ಲಿ ಸರ್ಕಾರಿ ನೌಕರನ ವಿರುದ್ಧದ ಕ್ರಿಮಿನಲ್ ಪ್ರಕರಣಗಳಲ್ಲಿ ತನಿಖೆಯನ್ನು ಪೂರ್ಣಗೊಳಿಸಿದ ನಂತರ ಚಾರ್ಜ್ ಷೀಟನ್ನು ಸಕ್ಷಮ ನ್ಯಾಯಾಲಯದಲ್ಲಿ ದಾಖಲಿಸುವ ಸಂದರ್ಭದಲ್ಲಿ ಸರ್ಕಾರಿ ನೌಕರನನ್ನು ಎರಡನೇ ಬಾರಿ ಅಮಾನತ್ತಿನಲ್ಲಿ ಇಡಬಹುದೇ ಎಂಬ ಬಗ್ಗೆ ಸೂಚನೆಗಳನ್ನು ಹಾಗೂ ಕ್ರಿಮಿನಲ್ ನ್ಯಾಯಾಲಯದಲ್ಲಿ ದಂಡನೆಗೆ ಒಳಗಾದ ಸರ್ಕಾರಿ ನೌಕರನು ದಂಡನೆ ಆದೇಶದ ವಿರುದ್ಧ ತಡೆಯಾಜ್ಞೆ ಪಡೆದುಕೊಂಡಾಗಲಾಗಲೀ ಅಥವಾ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆಯಾದಾಗಲಾಗಲೀ ಅಥವಾ ಅಪರಾಧ ನಿರ್ಣಯ ತಡೆಹಿಡಿದ ಪ್ರಕರಣದಲ್ಲಿ ತೆಗೆದುಕೊಳ್ಳಬೇಕಾದ ಕ್ರಮದ ಕುರಿತು ಸೂಚನೆಗಳನ್ನು ನೀಡಲಾಗಿದೆ.

8. ಉಲ್ಲೇಖ (10)ರಲ್ಲಿನ ದಿನಾಂಕ 15.4.2002ರ ಅಧಿಸೂಚನೆಯಲ್ಲಿ, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮಕ್ಕೆ ತಿದ್ದುಪಡಿಯನ್ನು ಮಾಡಲಾಗಿದೆ. ಹೀಗೆ ತಿದ್ದುಪಡಿ ಮಾಡಲಾಗಿರುವ ನಿಯಮ 10 ರ ಸುಸಂಬದ್ಧ ಭಾಗ ಈ ಕೆಳಕಂಡಂತಿದೆ:–

"10 (1) The Appointing Authority or any authority to which it is sub-ordinate or any other authority empowered by the Government in this behalf may place a Government servant under suspension-

(a) Where there is prima facie evidence to show that he was caught red-handed while accepting gratification other than legal remuneration by the persons authorised to investigate under the provisions of the Prevention of Corruption Act, 1988 or under any other law;

(b) where a charge sheet is filed before the competent Court against him for any offence involving moral turpitude committed in the course of his duty; or

(c) where a charge sheet is filed before the competent Court against him on charges of corruption, embezzlement or criminal misappropriation of Government money;

(d) where there is prima facie evidence of gross dereliction of duty against him."

(2) A Government servant shall be deemed to have been placed under suspension by an order of appointing authority-

(a) with effect from the date of his detention, if he is detained in custody, whether on a criminal charge or otherwise, for a period exceeding forty-eight hours;

(b) with effect from the date of his conviction, if in the event of a conviction for an offence, he is sentenced to a term of imprisonment exceeding forty-eight hours and is not forthwith dismissed or removed or compulsorily retired consequent to such conviction.

**Explanation:-** The period of forty-eight hours referred to in clause (b) of this sub-rule shall be computed from the commencement of the imprisonment after the conviction and for this purpose, intermittent periods of imprisonment if any, shall be taken into account."

ಮೇಲ್ಕಂಡ ಸಂದರ್ಭ / ಸನ್ನಿವೇಶಗಳಲ್ಲದೆ ಬೇರೆ ಸಂದರ್ಭ / ಸನ್ನಿವೇಶಗಳಲ್ಲಿ ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿರಿಸಲು ಅವಕಾಶವಿರುವುದಿಲ್ಲ.

9. ಆದ್ದರಿಂದ, ಯಾವ ಸಂದರ್ಭ:ಸನ್ನಿವೇಶದಲ್ಲಿ ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿರಿಸಬಹುದು ಎಂಬ ಬಗ್ಗೆ ಮೇಲೆ (1) ರಿಂದ (9) ರವರೆಗೆ ಉಲ್ಲೇಖಿಸಿರುವ ಅಧಿಕೃತ ಜ್ಞಾಪನಗಳು ಹಾಗೂ ಸುತ್ತೋಲೆಗಳಲ್ಲಿ ಏನೇ ಸೂಚನೆಗಳನ್ನು ನೀಡಿದ್ದರೂ ಅವು ಉಲ್ಲೇಖ (10)ರಲ್ಲಿನ ದಿನಾಂಕ 15.4.2002ರ ಅಧಿಸೂಚನೆಯಲ್ಲಿನ ತಿದ್ದುಪಡಿಯಿಂದಾಗಿ ನಿರರ್ಥಕವಾಗಿವೆ. ಆದ್ದರಿಂದ ಸಕ್ಷಮ ಪ್ರಾಧಿಕಾರಿಗಳು ದಿನಾಂಕ: 15.4.2002ರ ಅಧಿಸೂಚನೆಯಲ್ಲಿ ತಿಳಿಸಿರುವ ಸಂದರ್ಭಗಳಲ್ಲಿ ಮಾತ್ರ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿ ಇರಿಸಬಹುದಾಗಿದೆ.

10. ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿ ಇಡುವ ಅಧಿಕಾರ ಹೊಂದಿರುವ ಎಲ್ಲಾ ಪ್ರಾಧಿಕಾರಿಗಳು ಈ ಸೂಚನೆಯನ್ನು ಗಮನದಲ್ಲಿರಿಸಿಕೊಳ್ಳಬೇಕೆಂದು ಸೂಚಿಸಲಾಗಿದೆ.

**ಕೆ.ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಪಿ.ಆರ್. 701 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು).

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಎಂ.ಎಂ.ಕಿತ್ತೂರು ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗರವರ ವಿರುದ್ಧದ ಇ ಲಾಖಾ ವಿಚಾರಣೆಗೆ - ದಂಡನೆ ವಿಧಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇ ಲಾಖೆ ಇ ವರ ಪತ್ರ ಸಂಖ್ಯೆ: ಡಿಪಿಎಸ್:ಬಿಡಿಜಿ/34/2001ದಿನಾಂಕ:11.06.2001 ಮತ್ತು 22.03.2002,
2. ಶ್ರೀ ಎಂ.ಎಂ. ಕಿತ್ತೂರ್, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ, ಇ ವರಿಗೆ ಜಾರಿ ಮಾಡಲಾದ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ:ಲಾ 234 ಪಿಪಿಇ 2001, ದಿನಾಂಕ: 31.12.2001.
3. ಶ್ರೀ ಎಂ.ಎಂ.ಕಿತ್ತೂರು. ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ ಇ ವರ ಲಿಖಿತ ಹೇಳಿಕೆ ದಿನಾಂಕ: 31.01.2002.
4. ಸರ್ಕಾರದ ಆದೇಶ ಸಂಖ್ಯೆ:ಲಾ 234 ಪಿಪಿಇ 01 ದಿನಾಂಕ: 06.05.2002.
5. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ:22.09.03.
6. ಸರ್ಕಾರದ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 234 ಪಿಪಿಇ 2001 ದಿನಾಂಕ:27.10.2003.
7. ಶ್ರೀ ಎಂ.ಎಂ.ಕಿತ್ತೂರು, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ, ಇ ವರ ಅಹವಾಲು ಸಂಖ್ಯೆ: ಸಅ:ಅಭಿ:ಎಸ್‌ಸಿ:111:2000 ದಿನಾಂಕ:23.12.2003.

**ಪ್ರಸ್ತಾವನೆ:**

ಶ್ರೀ ಎಂ.ಎಂ.ಕಿತ್ತೂರ್, ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಗದಗ ಇ ವರು ಗದಗ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಎಸ್.ಸಿ.ನಂ.111/2000ರ ಪ್ರಕರಣವನ್ನು ಸರ್ಕಾರದ ಪರವಾಗಿ ನಡೆಸಿದ್ದು, ಸದರಿ ಪ್ರಕರಣದ ಅಭಿಯೋಜನೆ ಪಕ್ಷದ ಕೇಸಿನ ಪ್ರಕಾರ 3ನೇ ಆರೋಪಿಯು ನೀಡಿದ ದುಷ್ಪ್ರೇರಣೆಯಿಂದ 1ನೇ ಆರೋಪಿಯು ಮೃತಳ ಮೈ ಮೇಲೆ ಕ್ಯಾನ್‌ನಿಂದ ಸೀಮೆ ಎಣ್ಣೆ ಸುರಿದಳೆಂದು, 2ನೇ ಆರೋಪಿಯು ಬೆಂಕಿಕಡ್ಡಿ ಗೀರಿ ಹಚ್ಚಿದಳೆಂದು ಕಂಡು ಬಂದಿದ್ದು, ಪ್ರಾಸಿಕ್ಯೂಷನ್ ಸಾಕ್ಷಿ 4ರವರು ತಮ್ಮ ಸಾಕ್ಷ್ಯದಲ್ಲಿ 2ನೇ ಆರೋಪಿ ಸೀಮೆ ಎಣ್ಣೆ ಸುರಿದರೆಂದು, 1ನೇ ಆರೋಪಿಯು ಬೆಂಕಿ ಕಡ್ಡಿಯಿಂದ ಬೆಂಕಿ ಹಚ್ಚಿದಳೆಂದು ಸಾಕ್ಷ್ಯ ನುಡಿದಿದ್ದು, ಸದರಿ ಅಂಶವು ಅಭಿಯೋಜನಾ ಪಕ್ಷದ ಕೇಸಿಗೆ ವಿರುದ್ಧವಾಗಿದ್ದರೂ ಅಭಿಯೋಜನೆ ನಡೆಸಿದ ಶ್ರೀ ಎಂ.ಎಂ.ಕಿತ್ತೂರ್, ಇ ವರು ಸದರಿ ಸಾಕ್ಷಿದಾರರನ್ನು ಪ್ರತಿಕೂಲ ಸಾಕ್ಷಿಯನ್ನಾಗಿ ಪರಿಗಣಿಸಿ ಪಾಟಿ ಸವಾಲು ಮಾಡಿ, ಅಭಿಯೋಜನಾ ಪಕ್ಷದ ಕೇಸಿನ ಪ್ರಕಾರ ಸಾಕ್ಷ್ಯವನ್ನು ನ್ಯಾಯಾಲಯದ ಮುಂದೆ ನುಡಿಸದೇ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿಸಿ ಬೇಜವಾಬ್ದಾರಿಯಿಂದ ನಡೆದುಕೊಂಡಿರುವುದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1)ರ ಉಪ ನಿಯಮ (iii)ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಕಂಡುಬರುವುದರಿಂದ, ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರಮಾಂಕ:1 ರಲ್ಲಿ ಓದಲಾದ ಪತ್ರಗಳಲ್ಲಿ, ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇ ಲಾಖೆ, ಬೆಂಗಳೂರು ಇ ವರು ಸರ್ಕಾರವನ್ನು ಕೋರಿದ್ದರು.

ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಸಂಬಂಧವಾಗಿ ಅವರ ವಿರುದ್ಧ ಅನುಬಂಧ-1 ರಿಂದ 4 ರವರೆಗೆ ದೋಷಾರೋಪಣಾ ಪಟ್ಟಿ ತಯಾರಿಸಿ, ದೋಷಾರೋಪಣೆಗಳ ಬಗ್ಗೆ ತಮ್ಮ ಲಿಖಿತ ರಕ್ಷಣಾತ್ಮಕ ಹೇಳಿಕೆಯನ್ನು ಸಲ್ಲಿಸುವಂತೆ ಅಗತ್ಯ ಕಾಲಾವಕಾಶ ನೀಡಿ ಮೇಲೆ ಓದಲಾದ ಕ್ರಮಾಂಕ(2)ರಲ್ಲಿ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ಸದರಿ ಅಧಿಕಾರಿಯವರಿಗೆ ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಶ್ರೀ ಎಂ.ಎಂ.ಕಿತ್ತೂರುರವರು ತಮ್ಮ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿದ್ದರಿಂದ ಸದರಿಯವರ ಮೇಲಿನ ಆಪಾದನೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಇ ಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ ಮೇಲೆ ಓದಲಾದ ಕ್ರಮಾಂಕ (4)ರನ್ವಯ ವಿಚಾರಣಾ ಪ್ರಾಧಿಕಾರವನ್ನು ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಮೇಲ್ಕಂಡ ಸರ್ಕಾರದ ಆದೇಶದಂತೆ ವಿಚಾರಣಾ ಪ್ರಾಧಿಕಾರವು ಇ ಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಮೇಲೆ ಓದಲಾದ ಕ್ರಮಾಂಕ (5)ರಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಎಂ.ಎಂ.ಕಿತ್ತೂರು ಇ ವರ ಮೇಲಿನ 3ಆಪಾದನೆಗಳು ಸಾಬೀತಾಗಿರುತ್ತದೆ ಎಂಬ ಅಭಿಪ್ರಾಯವನ್ನು ವಿಚಾರಣಾಧಿಕಾರಿಯವರು ವ್ಯಕ್ತಪಡಿಸಿರುತ್ತಾರೆ.

ವಿಚಾರಣಾ ವರದಿಯನ್ನು ಆಧರಿಸಿ 1957ರ ಕೆ.ಸಿ.ಎಸ್(ಸಿಸಿಎ) ನಿಯಮಾವಳಿ ನಿಯಮದನ್ವಯ ತಮ್ಮ ವಿರುದ್ಧ ಶಿಸ್ತು ಕ್ರಮಜರುಗಿಸಬಾರದೇಕೆಂಬ ಬಗ್ಗೆ ಅಹವಾಲನ್ನು ಲಿಖಿತವಾಗಿ ಸಲ್ಲಿಸಲು ಕಾಲಾವಕಾಶ ನೀಡಿ ಮೇಲ್ಕಂಡ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದಿನಾಂಕ 27.10.2003ರಂದು ಶ್ರೀ ಎಂ.ಎಂ.ಕಿತ್ತೂರು ಇ ವರಿಗೆ ಮೇಲೆ ಓದಲಾದ ಕ್ರಮಾಂಕ (6)ರಲ್ಲಿ ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (7)ರಲ್ಲಿ ಶ್ರೀ ಎಂ.ಎಂ.ಕಿತ್ತೂರುರವರು ತಮ್ಮ ಲಿಖಿತ ಅಹವಾಲನ್ನು ಸರ್ಕಾರಕ್ಕೆ ಸಲ್ಲಿಸಿ ತಮ್ಮ ಮೇಲಿನ 3 ಆರೋಪಗಳು ಸಾಬೀತಾಗಿರುತ್ತವೆ ಎಂಬ ವಿಚಾರಣಾ ಪ್ರಾಧಿಕಾರದ ಅಭಿಪ್ರಾಯವನ್ನು ಅಲ್ಲಗಳೆದು ತಮ್ಮ ಅಹವಾಲನ್ನು ಮತ್ತೊಮ್ಮೆ ಪರಿಶೀಲಿಸಿ ಆಪಾದನೆಗಳನ್ನು ತಳ್ಳಿಹಾಕಬೇಕಾಗಿ ವಿನಂತಿಸಿಕೊಂಡಿರುತ್ತಾರೆ.

ಸರ್ಕಾರಕ್ಕೆ ಮೇಲೆ ಓದಲಾದ ಕ್ರಮಾಂಕ (6)ರ ವಿಚಾರಣಾ ಪ್ರಾಧಿಕಾರದ ವಿಚಾರಣಾ ವರದಿಯನ್ನು ಮತ್ತು ಶ್ರೀ ಎಂ.ಎಂ.ಕಿತ್ತೂರು ಇ ವರು ಮೇಲೆ ಓದಲಾದ ಕ್ರಮಾಂಕ (7)ರಲ್ಲಿ ಸಲ್ಲಿಸಿರುವ ಲಿಖಿತ ಅಹವಾಲನ್ನು ಸಮಗ್ರವಾಗಿ ಹಾಗೂ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 234 ಪಿಪಿಇ 2001, ಬೆಂಗಳೂರು, ದಿನಾಂಕ: 21ನೇ ಜೂನ್ 2004**

ಶ್ರೀ ಎಂ.ಎಂ.ಕಿತ್ತೂರ, ಸರ್ಕಾರಿ ಅಭಿಯೋಜಕರು, ಗದಗ, ಇ ವರ ಮೇಲಿದ್ದ 3 ಆರೋಪಗಳು ಸಾಬೀತಾಗಿರುವುದರಿಂದ ಕೆ.ಸಿ.ಎಸ್. (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8ರ ಉಪನಿಯಮ(iii) ರನ್ವಯ ಇ ವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ನಂತರದ ವೇತನಾ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆ ಹಿಡಿಯುವ ಶಿಕ್ಷೆ ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್.ಈಶ್ವರ ಪ್ರಸಾದ್**

ಪಿ.ಆರ್. 677 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇ ಲಾಖೆ(ಆಡಳಿತ-2).

**ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ**

**ವಿಷಯ:** ಶ್ರೀ ವಿಠಲ್ ರಾವ್, ಪಿಸಿ 76, ಕೋಲಾರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಕೋಲಾರ ಜಿಲ್ಲೆ ರವರ ಆದೇಶ ಸಂಖ್ಯೆ: ಪನ್ಷಿ/135/2000-01 ಓಬಿ 242/2000-01, ದಿನಾಂಕ: 9.1.2001.
2. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ರವರ ಆದೇಶ ಸಂಖ್ಯೆ: ಅಪೀಲು/100/2000-01, ದಿನಾಂಕ: 1.6.2001.
3. ಅರ್ಜಿದಾರರ ಮನವಿ ದಿನಾಂಕ: 4.8.2003.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2) 64/2003-04, ದಿನಾಂಕ: 7.1.2004.

**ಪ್ರಸ್ತಾವನೆ:**

ಶ್ರೀ ವಿಠಲರಾವ್, ಪಿಸಿ 76, ಕೋಲಾರ ಜಿಲ್ಲೆ ರವರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಿರುದ್ಧ "ದಿನಾಂಕ: 8.11.2000 ರಂದು ಕಳವು ಮಾಡಲು ಪ್ರಯತ್ನಿಸಿದ ಕಳ್ಳನನ್ನು ಹಿಡಿದಿದ್ದು, ಅವನ ಪರಿಸ್ಥಿತಿ ಗಮನಿಸದೇ ಕೈಗೆ ಕಟ್ಟಿದ್ದ ಮಫ್ಲರನ್ನು ಬಿಚ್ಚಿ ಓಡಿಹೋಗಲು ಆಸ್ಪದ ನೀಡಿದ" ಆಪಾದನೆಯ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಒಂದು ವೇತನಬಡ್ತಿಯನ್ನು ಸಂಚಿತಪರಿಣಾಮವಾಗಿ 1 ವರ್ಷಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸದೇ ಕೇವಲ ಊಹೆಯ ಆಧಾರದ ಮೇಲೆ ದೊಡ್ಡ ಶಿಕ್ಷೆ ವಿಧಿಸಲಾಗಿದೆ. ದೋಷಾರೋಪ ಸ್ಪಷ್ಟವಾಗಿಲ್ಲ. ತನ್ನ ಸೇವಾವಧಿಯಲ್ಲಿ ಯಾವುದೇ ಶಿಕ್ಷೆ ಅನುಭವಿಸಿಲ್ಲ ಎಂದು ವಾದಿಸಿರುತ್ತಾರೆ.

ಆದರೆ ಸಿಪಿಐ ರವರ ವರದಿಯಲ್ಲಿ ಅರ್ಜಿದಾರರು ಮಫ್ಲರನ್ನು ಬಿಚ್ಚಿದ್ದರಿಂದಲೇ ಕಳ್ಳನು ಓಡಿಹೋಗಿರುವುದಾಗಿಯೂ ಗುಂಡು ಹಾರಿಸಿದಾಗಲೂ ಸಿಗದೇ ಇದ್ದುದು ಸ್ಪಷ್ಟವಾಗಿರುತ್ತದೆ. ಅರ್ಜಿದಾರರು ತಮ್ಮ ಮೇಲಿನ ಆಪಾದನೆಯನ್ನು ಅಲ್ಲಗಳೆಯುವಂತಹ ಯಾವುದೇ ವಾದಾಂಶವನ್ನು ಸಹ ಮಂಡಿಸದಿದ್ದು, ಅವರು ಎಸಗಿರುವ ತಪ್ಪಿಗೆ ವಿಧಿಸಿರುವ ಶಿಕ್ಷೆ ಅನುಗುಣವಾಗಿದೆ. ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 142 ಪೊಸಿಅ 2003, ಬೆಂಗಳೂರು, ದಿನಾಂಕ: 10ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿಠಲರಾವ್, ಪಿಸಿ, ಕೋಲಾರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 681 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಬಿ. ನರಸಿಂಹಯ್ಯ, ಎ.ಎಸ್.ಐ., ತುಮಕೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಎಸ್.ಪಿ. ತುಮಕೂರು ಜಿಲ್ಲೆ ರವರ ಆದೇಶ ಸಂಖ್ಯೆ: ಡಿಇ 28:2000 ಓಬಿ 180/2002, ದಿ: 20.08.2002.
2. ಐಜಿಪಿ, ಕೇಂದ್ರ ವಲಯ, ಬೆಂಗಳೂರು ರವರ ಆದೇಶ ಸಂಖ್ಯೆ: ಅಪೀಲು: 33: 02-03 ಸಿಟಿ ಸಂಖ್ಯೆ: 134: 02-03, ದಿನಾಂಕ: 6.10.2002.
3. ಅರ್ಜಿದಾರರ ಮನವಿ ದಿನಾಂಕ: 8.7.2003.
4. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರ ಪತ್ರ ಸಂಖ್ಯೆ: ಅಪೀಲು (2)/46/ 2003-04, ದಿನಾಂಕ: 15.10.2003.

**ಪ್ರಸ್ತಾವನೆ:**

ಶ್ರೀ ಬಿ. ನರಸಿಂಹಯ್ಯ, ಎ.ಎಸ್.ಐ., ಗುಬ್ಬಿ ಪೊಲೀಸ್ ಠಾಣೆ ತುಮಕೂರು ರವರ ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

ಶ್ರೀ ಬಿ. ನರಸಿಂಹಯ್ಯ, ಎ.ಎಸ್.ಐ., ಕೆ.ಜಿ. ಹಳ್ಳಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 24.3.2001 ರಂದು ಬೆಳಿಗ್ಗೆ 10.30 ಗಂಟೆಯ ಸಮಯದಲ್ಲಿ ಪಿ.ಎಸ್.ಐ. ಶ್ರೀ ಹೆಚ್.ಜಿ. ಸೋಮಶೇಖರಯ್ಯ ರವರಿಗೆ ಜಾತಿ ರಾಜಕೀಯ ಮಾಡುತ್ತೀಯಾ ಅಂತಾ ಏಕವಚನದಲ್ಲಿ ಮಾತನಾಡಿ ಎಸ್.ಸಿ.ಆರ್. 49:01 ನೇದ್ದರ ವಿಚಾರಣೆಗೆ ಬೆಂಗಳೂರಿಗೆ ಹೋಗುವುದಿಲ್ಲವೆಂದು ನಿರಾಕರಿಸಿದ್ದು, ಸದರಿ ಫೈಲನ್ನು ಟೇಬಲ್ ಮೇಲೆ ಎಸೆದು ಅಸಭ್ಯ ರೀತಿ ವರ್ತಿಸಿ ಕರ್ತವ್ಯದಲ್ಲಿ ದುರ್ನಡತೆ ಅಶಿಸ್ತನ್ನು ವ್ಯಕ್ತಪಡಿಸಿರುತ್ತೀರಿ.

ಮೇಲ್ಕಂಡ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮವಾಗಿ 2 ವರ್ಷ ಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲ್ಕಂಡ 2 ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲಾತಿಗಳೊಂದಿಗೆ ಪರಿಶೀಲಿಸಲಾಗಿದ್ದು ಅದರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿದೆ.

1) ದಿನಾಂಕ: 24.3.2001 ರಂದು ಘಟನೆ ನಡೆದಿದ್ದು ಆ ದಿನ ಠಾಣೆಗೆ ಭೇಟಿ ನೀಡಿದ ಡಿವೈ.ಎಸ್.ಪಿ. ರವರು ಘಟನೆ ನಡೆದಿಲ್ಲ ಎಂದು ಠಾಣಾ ದಿನಚರಿಯಲ್ಲಿ ನಮೂದಿಸಿದ್ದು ತಾನು ನಿರ್ದೋಷಿ ಎಂದು ಸಾಬೀತಾಗುತ್ತದೆ.

2) ಅ.ಸಾ. 1, 2, 3, 4, 5, 6, 7, 8 ಮತ್ತಿತರರು ತಾನು ಡ್ಯೂಟಿ ನಿರಾಕರಿಸಿರುವ ಬಗ್ಗೆ ಹಾಗೂ ಫೈಲನ್ನು ಟೇಬಲ್ ಮೇಲೆ ಎಸೆದಿರುವ ಬಗ್ಗೆ ನುಡಿದಿಲ್ಲ.

3) ದೋಷಾರೋಪ ಸಾಬೀತಾಗಿಲ್ಲ.

4) ಪಿ.ಎಸ್.ಐ.ರವರು ತಮ್ಮ ವಿರುದ್ಧ ಸಾಕ್ಷಿ ಹೇಳಿಲ್ಲ.

ಉಳಿದ ವಾದಾಂಶಗಳು ಪುನರಾವರ್ತನೆಯಾಗಿದ್ದು ಮೇಲ್ಮನವಿ ಪ್ರಾಧಿಕಾರಿ ತಮ್ಮ ಆದೇಶದಲ್ಲಿ ಈ ಬಗ್ಗೆ ಚರ್ಚಿಸಿರುತ್ತಾರೆ. ಹೊಸ ಅಂಶಗಳಿರುವುದಿಲ್ಲ. ಇಲಾಖಾ ವಿಚಾರಣೆ ವರದಿಯಲ್ಲಿ ಅವರ ಮೇಲಿನ ಆರೋಪಗಳು ನಿಸ್ಸಂದೇಹವಾಗಿ ಸಾಬೀತಾಗಿವೆ ಎಂದು ನುಡಿದಿರುವ ಹಿನ್ನಲೆಯಲ್ಲಿ ಅರ್ಜಿದಾರರು ಎಸಗಿರುವ ತಪ್ಪಿಗೆ ವಿಧಿಸಿರುವ ಶಿಕ್ಷೆ ಅನುಗುಣವಾಗಿವೆ. ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 94 ಪೊಸಿಇ 2004, ಬೆಂಗಳೂರು, ದಿನಾಂಕ: 22ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿಗಳು 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ನರಸಿಂಹಯ್ಯ, ಎ.ಎಸ್.ಐ., ತುಮಕೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 679

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಚೆನ್ನೇಗೌಡ, ಎಪಿಸಿ 140 ಡಿಎಆರ್, ಮಂಡ್ಯ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಮಂಡ್ಯ ಜಿಲ್ಲೆ ರವರ ಆದೇಶ ಸಂಖ್ಯೆ: ಸಿಬ್ಬಂದಿ (1)/ಇವಿ/14/93-94 ಓಬಿ ಸಂಖ್ಯೆ: 251/94-95, ದಿನಾಂಕ: 13.1.95.
2. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ರವರ ಆದೇಶ ಸಂಖ್ಯೆ: ಅಪೀಲು/17/2002-03, ದಿನಾಂಕ: 8.9.2003.
3. ಅರ್ಜಿದಾರರ ಮನವಿ ದಿನಾಂಕ: 10.10.2003.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2) 89/2003-04, ದಿನಾಂಕ: 16.2.2004.

**ಪ್ರಸ್ತಾವನೆ:**

ಶ್ರೀ ಚೆನ್ನೇಗೌಡ, ಎಪಿಸಿ 140, ಡಿಎಆರ್, ಮಂಡ್ಯ ಜಿಲ್ಲೆ ರವರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ನೀವು ಶ್ರೀ ಚನ್ನೇಗೌಡ, ಎಪಿಸಿ 140, ಡಿಎಆರ್, ಮಂಡ್ಯ ರವರು ಮದುವೆಯಾದ ಮೊದಲನೇ ಹೆಂಡತಿ ಮತ್ತು ಮಕ್ಕಳು ಜೀವಂತ ಬದುಕಿದ್ದರೂ ಸಹ ಶ್ರೀಮತಿ ಸರಸ್ವತಮ್ಮನವರ ಸಂಬಂಧಿಕರಿಗೆ ನೀವು ಮದುವೆಯಾಗಿಲ್ಲ ಎಂದು ಸುಳ್ಳು ಹೇಳಿ ನಂಬಿಸಿ ಸರಸ್ವತಮ್ಮಳನ್ನು ಶಾಸ್ತ್ರೋಕ್ತವಾಗಿ ಈಗ್ಗೆ ಮೂರು ವರ್ಷಗಳ ಹಿಂದೆ ಕನಕಪುರದ ಆಂಜನೇಯ ದೇವಸ್ಥಾನದಲ್ಲಿ ಎರಡನೇ ಮದುವೆ ಮಾಡಿಕೊಂಡಿದ್ದು, ಹಾಲೀ ಸರಸ್ವತಮ್ಮಳಿಗೆ ಎರಡು ವರ್ಷದ ಒಂದು ಗಂಡು ಮಗು ಇರುತ್ತದೆ, ಹೀಗೆ ನೀವು ಶಿಸ್ತಿನ ಇಲಾಖೆಯಲ್ಲಿದ್ದುಕೊಂಡು ಕಾನೂನು ಬಲ್ಲವರಾಗಿದ್ದು, ಮದುವೆಯಾದ ಮೊದಲನೇ ಹೆಂಡತಿ ಮತ್ತು ಮಕ್ಕಳು ಜೀವಂತವಿದ್ದರೂ ಸಹ ಮದುವೆಯಾಗಿಲ್ಲವೆಂದು ಸುಳ್ಳು ಹೇಳಿ ನಂಬಿಸಿ ಮೋಸದಿಂದ ಎರಡನೇ ಮದುವೆ ಮಾಡಿಕೊಂಡಿರುತ್ತೀರಿ. ಮತ್ತು ಸಿಸಿಎ ನಿಯಮಾವಳಿಗಳು 28ರ ರೀತ್ಯಾ ಅಪರಾಧವೆಸಗಿರುತ್ತಾರೆ."

ಮೇಲ್ಕಂಡ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಅವರ ಹುದ್ದೆಯ ಕನಿಷ್ಠ ಮಟ್ಟಕ್ಕೆ 5 ವರ್ಷಗಳ ಕಾಲ ಇಳಿಸಿ ಹೊಸದಾಗಿ ವೇತನಬಡ್ತಿಯನ್ನು ಗಳಿಸಲು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಶ್ರೀಮತಿ ಸರಸ್ವತಿ ಎಂಬುವರು ಯಾರ್ಯಾರದೋ ಮಾತು ಕೇಳಿಕೊಂಡು ವಿನಾಕಾರಣ ಅರ್ಜಿದಾರರ ಮೇಲೆ ದೂರು ನೀಡಿದ್ದೆನು. ತನಗೆ ಶ್ರೀ ಶಂಕರ್ ಎಂಬುವರೊಡನೆ ಮದುವೆಯಾಗಿದೆ. ಅರ್ಜಿದಾರರು ತನಗೆ ಗೊತ್ತಿರುವುದಿಲ್ಲ ಎಂದು ಇಲಾಖಾ ವಿಚಾರಣೆಯಲ್ಲಿ ಹೇಳಿಕೆ ನೀಡಿರುತ್ತಾರೆ. ಆದ್ದರಿಂದ ತನ್ನ ವಿರುದ್ಧದ 2ನೇ ಮದುವೆ ಆರೋಪ ಸತ್ಯವಲ್ಲ ಎಂದು ವಾದಿಸಿರುತ್ತಾರೆ.

ಶ್ರೀಯುತರು ತಮಗೆ ಮದುವೆಯಾಗಿಲ್ಲ ಎಂದು ಸುಳ್ಳು ಹೇಳಿ ನಂಬಿಸಿ, ಶ್ರೀಮತಿ ಸರಸ್ವತಿ ಎಂಬುವರನ್ನು ಎರಡನೇ ಮದುವೆ ಮಾಡಿಕೊಂಡಿರುವುದಕ್ಕೆ ಹಲವಾರು ಸಾಕ್ಷಿಗಳು ಸಾಕ್ಷ್ಯ ನುಡಿದಿರುತ್ತಾರೆ. ಇವರು ಮದುವೆಯಾಗಿರುವುದಕ್ಕೆ ಲಗ್ನಪತ್ರಿಕೆ ಹಾಗೂ ಇವರಿಬ್ಬರ ಭಾವಚಿತ್ರ ಸಾಕ್ಷ್ಯಗಳಾಗಿದ್ದು, ಇವುಗಳಿಂದ ಅರ್ಜಿದಾರರ ಮೇಲಿನ ಆರೋಪ ನಿಸ್ಸಂದೇಹವಾಗಿ ಸಾಬೀತಾಗಿದೆ. ದಿನಾಂಕ: 24.9.93 ರಂದು ಅರ್ಜಿದಾರರು ತಮ್ಮ ಹೇಳಿಕೆಯಲ್ಲಿ ತಮಗೆ ಈ ಮೊದಲು ಮದುವೆಯಾಗಿದ್ದು, 3 ಜನ ಮಕ್ಕಳಿದ್ದು, ಅನಂತರ ಗುತ್ತಲಿನಲ್ಲಿ ವಾಸವಾಗಿದ್ದ ಸರಸ್ವತಿ ಎಂಬುವರ ಜೊತೆ ಸ್ನೇಹ ಬೆಳೆದು ಮದುವೆಯಾಗಿ, ಒಂದು ಮಗು ಸಹ ಇರುವುದಾಗಿ ಲಿಖಿತ ಹೇಳಿಕೆಯನ್ನು ನೀಡಿರುವುದು ಅವರ ಮೇಲಿನ ಆಪಾದನೆ ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಶ್ರೀಮತಿ ಸರಸ್ವತಿಯವರೂ ಸಹ ತಮ್ಮ ದಿನಾಂಕ: 14.9.93ರ ಹೇಳಿಕೆಯಲ್ಲಿ ತಮ್ಮ ಯಜಮಾನರಾದ ಶ್ರೀ ಚನ್ನೇಗೌಡರು ತಮಗೆ ತಂದೆ ತಾಯಿ ಇಲ್ಲವೆಂದು ತಾನೊಬ್ಬನೇ ಇರುವುದಾಗಿ ಸುಳ್ಳು ಹೇಳಿ ಮೋಸ ಮಾಡಿ ತಮ್ಮನ್ನು ಮದುವೆಯಾಗಿದ್ದುದಾಗಿಯೂ, ನಂತರ ಅರ್ಜಿದಾರರಿಗೆ ಮೊದಲೇ ಮದುವೆಯಾಗಿದ್ದ ವಿಷಯ ತಿಳಿಯಿತೆಂದೂ ಹೇಳಿಕೆ ನೀಡಿರುತ್ತಾರೆ. ಆದ್ದರಿಂದ ಸದರಿಯವರು ತಾವು ಶ್ರೀ ಶಂಕರ್ ಎಂಬುವರೊಂದಿಗೆ ಮದುವೆಯಾಗಿದೆ, ಅರ್ಜಿದಾರರ ಪರಿಚಯವಿಲ್ಲ ಎಂಬ ತದನಂತರ ಹೇಳಿಕೆ ನಂಬಲರ್ಹವಲ್ಲ.

ನಿಸ್ಸಂದೇಹವಾಗಿ ಸಾಬೀತಾದ ಆರೋಪದ ಬಗ್ಗೆ ಅರ್ಜಿದಾರರಿಗೆ ವಿಧಿಸಿರುವ ಶಿಕ್ಷೆ ಅತ್ಯಂತ ಲಘುವಾಗಿರುತ್ತದೆ. ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 212 ಪೊಸಿಅ 2003, ಬೆಂಗಳೂರು, ದಿನಾಂಕ: 18ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿಗಳು 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಚೆನ್ನೇಗೌಡ, ಎಪಿಸಿ 140, ಡಿಎಆರ್, ಮಂಡ್ಯ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 680

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಂ. ಸಿದ್ದಲಿಂಗಯ್ಯ, ರೈಲ್ವೆ, ಪಿಎಸ್ಐ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ರೈಲ್ವೇಸ್, ಬೆಂಗಳೂರು ರವರ ಆದೇಶ ಸಂಖ್ಯೆ: ಪಿಆರ್/14/2001-02, ದಿನಾಂಕ: 13.9.2002.
2. ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೇಸ್, ಬೆಂಗಳೂರು ರವರ ಆದೇಶ ಸಂಖ್ಯೆ: ಡಿಇ/ಮೇ/2003, ದಿನಾಂಕ: 6.6.2003.

3. ಅರ್ಜಿದಾರರ ಮನವಿ ದಿನಾಂಕ: 5.9.2003.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2) 83/2003-04, ದಿನಾಂಕ: 16.2.2004.

**ಪ್ರಸ್ತಾವನೆ:**

ಶ್ರೀ ಎಂ. ಸಿದ್ದಲಿಂಗಯ್ಯ, ಪಿಎಸ್‌ಐ, ಬೆಸ್ಕಾಂ ಜಾಗೃತದಳ, ಬೆಂಗಳೂರು (ಹಾಲಿ ವಾಡಿ ರೈಲ್ವೆ ಪೊಲೀಸ್) ರವರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಿರುದ್ಧ ದಿನಾಂಕ: 23/24.5.2001 ರಂದು ಚೆನ್ನೈ ರೈಲುಗಾಡಿಯಲ್ಲಿ ಕಳುವಾದ ಲ್ಯಾಪ್‌ಟ್ಯಾಪ್ ಕಳುವಿನ ಬಗ್ಗೆ ದೂರನ್ನು ದಾಖಲಿಸದ" ಆರೋಪದ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

ಈ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 1 ವರ್ಷಕಾಲ ಮುಂದೂಡಿ ಆದೇಶ ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು, ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

ಮೇಲ್ಮನವಿ ಪ್ರಾಧಿಕಾರ ತನ್ನ ವಾದಾಂಶಗಳಿಗೆ ಚರ್ಚಿಸಿಲ್ಲ. ಆರ್‌ಪಿಸಿ ಶ್ರೀ ನಿರಂಜನಮೂರ್ತಿ ರವರು ಫಿರ್ಯಾದನ್ನು ಠಾಣೆಗೆ ತಂದಾಗ ತಾನು ಠಾಣಾಧಿಕಾರಿಯಾಗಿರಲಿಲ್ಲ. ತಾನು ದೂರನ್ನು ವಾಪಸ್ ಕಳುಹಿಸಿಲ್ಲ. ನಿಯಮ 6 ಮತ್ತು 8 ರಡಿ ಜಂಟೀ ಇಲಾಖಾ ವಿಚಾರಣೆ ನಡೆಸಿದ್ದರೆ ಸತ್ಯಾಂಶ ಹೊರ ಬೀಳುತ್ತಿತ್ತು ಎಂದು ವಾದಿಸಿರುತ್ತಾರೆ.

ಯಾವ ನಿಯಮದಡಿ ಇಲಾಖಾ ವಿಚಾರಣೆ ನಡೆಸಬೇಕೆನ್ನುವುದು ಶಿಸ್ತು ಪ್ರಾಧಿಕಾರಿಯ ವಿವೇಚನೆಗೆ ಬಿಟ್ಟ ವಿಷಯ. ಫಿರ್ಯಾದನ್ನು ದಾಖಲಿಸದೇ ಕಾಲವಿಳಂಬ ಮಾಡಿರುವುದು ರೈಲ್ವೆ ಡಿವೈಎಸ್‌ಪಿ ರವರ ವರದಿಯಿಂದ ನಿಸ್ಸಂದೇಹವಾಗಿ ಸಾಬೀತಾಗಿದೆ. ಅರ್ಜಿದಾರರು ಎಸಗಿರುವ ಕರ್ತವ್ಯ ನಿರ್ಲಕ್ಷತೆಗೆ ವಿಧಿಸಿರುವ ಶಿಕ್ಷೆ ಅನುಗುಣವಾಗಿದ್ದು, ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 93 ಪೊಸಿಅ 2004, ಬೆಂಗಳೂರು, ದಿನಾಂಕ: 11ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಸಿದ್ದಲಿಂಗಯ್ಯ, ಪಿಎಸ್‌ಐ, ವಾಡಿ ರೈಲ್ವೆ ಪೊಲೀಸ್ ಠಾಣೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 682

**ವಿಷಯ:** ಶ್ರೀ ಹೆಚ್. ರಾಮಕೃಷ್ಣ, ಹೆಚ್‌ಸಿ 460, ಬೆಂಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೆಂಗಳೂರು ಜಿಲ್ಲೆ ರವರ ಆದೇಶ ಸಂಖ್ಯೆ: 33/ಸಿಬ್ಬಂದಿ(4)ಶಿಕ್ಷೆ/ಡಿಇ/2000-01 ಓಬಿ ಸಂಖ್ಯೆ: 212/2002-03, ದಿನಾಂಕ: 30.7.2002.
2. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ರವರ ಆದೇಶ ಸಂಖ್ಯೆ: ಅಪೀಲು/54/2002-2003, ದಿನಾಂಕ: 20.2.2003.
3. ಅರ್ಜಿದಾರರ ಮನವಿ ದಿನಾಂಕ: 13.8.2003.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2) 75/2003-04, ದಿನಾಂಕ: 13.4.2004.

**ಪ್ರಸ್ತಾವನೆ:**

ಶ್ರೀ ಹೆಚ್. ರಾಮಕೃಷ್ಣ, ಹೆಚ್.ಸಿ. 460, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಶ್ರೀ ರಾಮಕೃಷ್ಣ ಹೆಚ್‌ಸಿ 460, ಹೊಸಕೋಟೆ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 27.7.2000 ರಂದು ಸಿವಿಲ್ 944/99 ಮತ್ತು 945/99 ರಲ್ಲಿ ಎಫ್.ಎಲ್.ಡಬ್ಲ್ಯೂ. ಜಾರಿಗಾಗಿ ನೇಮಿಸಿದ್ದಾಗ ಶ್ರೀಮತಿ ಅಮಲಮೇರಿ ಎಂಬುವರ ಮನೆಗೆ ಹೋಗಿ ಹಣ ಕೊಡುವಂತೆ ಕೇಳಿ ಕೊಡದೆ ಇದ್ದರೆ ಅವರ ಗಂಡನನ್ನು ದಸ್ತಗಿರಿ ಮಾಡುವುದಾಗಿ ಹೇಳಿದ್ದರಿಂದ ಆಕೆಯ ಹತ್ತಿರ ಇದ್ದ ಚಿನ್ನದ ಮಾಂಗಲ್ಯ ಸರವನ್ನು ಬಿಚ್ಚಿ ಕೊಟ್ಟಿದ್ದು, ಮಾರನೇ ದಿನ ಇವರ ಗಂಡನ ಜೊತೆ ಮತ್ತೊಬ್ಬ ಜಾಮೀನುದಾರರಾದ ತಮ್ಮಣ್ಣನವರ ಮನೆಗೆ ಹೋಗಿ

ಅವರಿಂದ ನಗದು ರೂ.5,000.00 ಗಳನ್ನು ತೆಗೆದುಕೊಂಡು ಬಂದಿದ್ದು, ಸದರಿ ಕೇಸು ಹಣವನ್ನು ಕಟ್ಟದೆ ಅಥವಾ ಅವರಿಗೂ ಸಹ ಕೊಡದೆ ನಿಮ್ಮ ಕರ್ತವ್ಯದಲ್ಲಿ ಲೋಪವೆಸಗಿ ನಿರ್ಲಕ್ಷತೆ, ದುರ್ನಡತೆ ಹಾಗೂ ಅಶಿಸ್ತನ್ನು ತೋರಿ ಪೊಲೀಸ್ ಇಲಾಖೆಯ ಶಿಸ್ತು ನಿಯಮಾವಳಿಗಳನ್ನು ಉಲ್ಲಂಘಿಸಿರುತ್ತೀರಿ."

ಮೇಲ್ಕಂಡ ಆರೋಪವು ಇಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾದ್ದರಿಂದ, ಶಿಸ್ತು ಪ್ರಾಧಿಕಾರಿ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದೇ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಹೆಚ್.ಸಿ. ಹುದ್ದೆಯ ಕನಿಷ್ಟ ಮಟ್ಟಕ್ಕೆ 3 ವರ್ಷಕಾಲ ಇಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಹಾಗೂ ಐಜಿಪಿ, ಕೇಂದ್ರವಲಯ, ಬೆಂಗಳೂರು ರವರು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

(1) ಮೊ.ಸಂ.106/93ರ ವಿಷಯದಲ್ಲಿ ಆರೋಪಿ ರಾಜ ಎಂಬುವರಿಗೆ ಫಿರ್ಯಾದುದಾರರ ಪತಿ ಮತ್ತೊಬ್ಬರು ಶಾಮೀಲಾಗಿದ್ದು, ಜಾಮೀನು ಪಡೆದು ಹೊರಬಂದ ಮೇಲೆ ಈವರೆಗೆ ನ್ಯಾಯಾಲಯಕ್ಕೆ ಹಾಜರಾಗಿಲ್ಲ. ಈ ಬಗ್ಗೆ ನ್ಯಾಯಾಲಯದಿಂದ ಎಫ್‌ಎಲ್‌ಡಬ್ಲ್ಯೂ ವಾರಂಟ್ ಜಾರಿ ಆಗಿರುತ್ತದೆ. ರೂ.10,000/- ಗಳನ್ನು ನ್ಯಾಯಾಲಯ ವಿಧಿಸಿದ್ದು, ರೂ.13,000/- ಗಳ ಚೈನ್ ಮತ್ತು 5,000/- ರೂ. ನಗದನ್ನು ನೀಡಲು ಸಾಧ್ಯವಿಲ್ಲ.

(2) ಪೂರ್ವಭಾವಿ ಇಲಾಖಾ ವಿಚಾರಣೆಯ ಆಧಾರದ ಮೇಲೆ ಶಿಕ್ಷೆ ವಿಧಿಸಲಾಗಿದೆ.

(3) ಇಲಾಖಾ ವಿಚಾರಣೆಯಲ್ಲಿ ಪ್ರಮುಖ ಸಾಕ್ಷಿಗಳು ತನ್ನ ವಿರುದ್ಧ ಸಾಕ್ಷ್ಯ ನುಡಿದಿಲ್ಲ.

ಅರ್ಜಿದಾರರು ಮೇಲ್ಮನವಿಯಲ್ಲಿ ಪ್ರತಿವಾದಿಸಿದ ಅಂಶಗಳನ್ನು ಇಲ್ಲಿಯೂ ಪುನರಾವರ್ತಿಸಿದ್ದು, ಸದರಿ ಅಂಶಗಳ ಬಗ್ಗೆ ಚರ್ಚಿಸಲಾಗಿದೆ. ನ್ಯಾಯಾಲಯದಲ್ಲಿ ಎಫ್‌ಎಲ್‌ಡಬ್ಲ್ಯೂ ವಾರಂಟ್ ಜಾರಿ ಮಾಡಿ ಜಾಮೀನುದಾರರು ಸಿಕ್ಕಿದ್ದರೂ ಸಹ ಅವರನ್ನು ದಸ್ತಗಿರಿ ಮಾಡದೇ ನ್ಯಾಯಾಲಯಕ್ಕೆ ಹಾಜರುಪಡಿಸದೇ ಕರ್ತವ್ಯಲೋಪ ಎಸಗಿರುವುದು ನಿಸ್ಸಂದೇಹವಾಗಿ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದೆ. ಅ.ಸಾ.1 ಮತ್ತು 3 ಹೇಳಿಕೆಗಳಿಂದಲೂ ಸಹ ಸಾಬೀತಾಗಿದೆ. ಅರ್ಜಿದಾರರು ಚೈನ್ ಹಾಗೂ ನಗದು ಹಣ ಪಡೆದಿರುವ ಬಗ್ಗೆ ಎಸ್.ಪಿ.ರವರ ಬಳಿ ದೂರು ನೀಡಿದ್ದರಿಂದಲೇ ಇಲಾಖಾ ವಿಚಾರಣೆ ಕಾರಣವಾಗಿದೆ. ಅವರ ವಾದಾಂಶಗಳಲ್ಲಿ ಅವರ ಮೇಲಿನ ಆರೋಪವನ್ನು ಅಲ್ಲಗಳೆಯುವಂತಹ ಅಂಶಗಳನ್ನು ಮಂಡಿಸಿಲ್ಲವಾಗಿದ್ದು, ಅವರಿಗೆ ವಿಧಿಸಿರುವ ಶಿಕ್ಷೆ ಆರೋಪಕ್ಕೆ ಅನುಗುಣ ವಾಗಿರುವುದರಿಂದ ಹಸ್ತಕ್ಷೇಪ ಮಾಡುವ ಅವಶ್ಯಕತೆ ಕಂಡುಬಂದಿರುವುದಿಲ್ಲ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 95 ಪೊಸಿಅ 2004, ಬೆಂಗಳೂರು, ದಿನಾಂಕ: 15ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್. ರಾಮಕೃಷ್ಣ, ಹೆಚ್‌ಸಿ 460, ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 683

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎ.ಹೆಚ್. ನಾರಾಯಣ, ಸಿಪಿಸಿ 622 ಮತ್ತು ಶ್ರೀ ಟಿ.ಜಿ. ಕುಮಾರಸ್ವಾಮಿ, ಪಿಸಿ 89 ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ತುಮಕೂರು ಜಿಲ್ಲೆ ರವರ ಆದೇಶ ಸಂಖ್ಯೆ: ಪನ್ನಿ/ಡಿಇ/36/96 ಓಬಿ 328/96-97, ದಿನಾಂಕ: 28.1.97.
2. ಕೆ.ಎ.ಟಿ. ಅರ್ಜಿ ಸಂಖ್ಯೆ: 983/984/1997 ದಿನಾಂಕ: 26.3.97.
3. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ತುಮಕೂರು ಜಿಲ್ಲೆ ರವರ ಆದೇಶ ಸಂಖ್ಯೆ: ಪನ್ನಿ/ಡಿಇ/36/96 ಓಬಿ ಸಂಖ್ಯೆ: 21/98-99, ದಿನಾಂಕ: 1.4.99.
4. ಅರ್ಜಿದಾರರ ಮನವಿ ದಿನಾಂಕ: 28.11.2001
5. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: 9/ಸಿಬ್ಬಂದಿ(3)/2000-01, ದಿನಾಂಕ: 2.8.2002.

**ಪ್ರಸ್ತಾವನೆ:**

ಶ್ರೀ ಎ.ಹೆಚ್. ನಾರಾಯಣ, ಸಿಪಿಸಿ 622, ಮತ್ತು ಶ್ರೀ ಟಿ.ಜಿ. ಕುಮಾರಸ್ವಾಮಿ, ಪಿಸಿ 89, ತುಮಕೂರು ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾದ ಆರೋಪದ ಬಗ್ಗೆ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರಿಬ್ಬರು ಪ್ರೊಬೇಷನರ್‌ಗಳಾದ್ದರಿಂದ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ ಅವಧಿ) ನಿಯಮಾವಳಿ 1977ರ ನಿಯಮ 6 ರಡಿ ಸೇವೆಯಿಂದ ತೆಗೆದುಹಾಕಲಾಗಿತ್ತು.

ನಂತರ ಮೇಲೆ (2) ರಲ್ಲಿ ಓದಲಾದ ಕೆ.ಎ.ಟಿ.ಯ ಪ್ರಕರಣದಲ್ಲಿ ಅರ್ಜಿದಾರರಿಬ್ಬರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಖುಲಾಸೆಯಾದಲ್ಲಿ ಅವರುಗಳನ್ನು ಸೇವೆಯಿಂದ ಡಿಸ್‌ಚಾರ್ಜ್ ಮಾಡಿರುವ ಪ್ರಕರಣವನ್ನು ಪುನರ್‌ಪರಿಶೀಲಿಸುವಂತೆ, ಮಾನ್ಯ ಕೆ.ಎ.ಟಿ.ಯು ಆದೇಶ ನೀಡಿರುತ್ತದೆ. ಅದರಂತೆ, ಕ್ರಿಮಿನಲ್ ಮೊಕದ್ದಮೆಯಲ್ಲಿ ಜೆ.ಎಂ.ಎಫ್.ಸಿ. ನ್ಯಾಯಾಲಯದ ವಿಚಾರಣೆಯಲ್ಲಿ ಪ್ರಸ್ತಾಪಿತ ಪ್ರಾಸಿಕ್ಯೂಷನ್ ಅನ್ನು ಬಲಪಡಿಸಲು ದಾಖಲೆಗಳಿಲ್ಲ ಹಾಗೂ ಪ್ರಾಸಿಕ್ಯೂಷನ್ ಪರವಾಗಿ ಸಾಕ್ಷಿಗಳ ಹೇಳಿಕೆಗಳಿಲ್ಲವಾದ್ದರಿಂದ ಆರೋಪಿತರನ್ನು ನ್ಯಾಯಾಲಯ ಖುಲಾಸೆಗೊಳಿಸಿದೆ. ಆದ್ದರಿಂದ ಕೆ.ಎ.ಟಿ. ತೀರ್ಪಿನ ಹಿನ್ನೆಲೆಯಲ್ಲಿ ಅರ್ಜಿದಾರರಿಬ್ಬರನ್ನೂ ಸೇವೆಯಲ್ಲಿ ಪುನರ್‌ಸ್ಥಾಪಿಸಿ, ಅವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಮತ್ತು ಕರ್ತವ್ಯ ರಹಿತ ಅವಧಿಯನ್ನು ವೇತನರಹಿತ ರಜೆಯೆಂದು ಶಿಸ್ತು ಪ್ರಾಧಿಕಾರಿ ಪರಿಗಣಿಸಿ, ಮೇಲೆ (3) ರಲ್ಲಿ ಓದಲಾದ ಆದೇಶವನ್ನು ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ನೇರವಾಗಿ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು, ದಿನಾಂಕ: 2.8.96 ರಿಂದ 31.3.99 ರವರೆಗಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಲು ಕೋರಿರುತ್ತಾರೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 22 ಸೇಇವಿ 2001, ದಿನಾಂಕ: 2.7.2001 ರಲ್ಲಿ ಒಂದು ವೇಳೆ ಸರ್ಕಾರಿ ನೌಕರರನ್ನು ಸೇವೆಗೆ ಪುನಃ ತೆಗೆದುಕೊಂಡಲ್ಲಿ, ವಜಾ ಆದ ದಿನಾಂಕದಿಂದ ಮತ್ತೆ ಸೇವೆಗೆ ತೆಗೆದುಕೊಂಡ ದಿನಾಂಕದವರೆಗೆ ಬಾಕಿ ವೇತನ, ವೇತನ ಬಡ್ತಿ, ಸೇವೆ ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಆತನು ಸ್ವಯಂಚಾಲಿತನಾಗಿ ಅರ್ಹನಾಗುವುದಿಲ್ಲ. ಪ್ರತಿ ಸಂದರ್ಭಕ್ಕೆ ಸಂಬಂಧಿಸಿದ ಸಂದರ್ಭ ಹಾಗೂ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಬಾಕಿ ವೇತನ ಇತ್ಯಾದಿ ಪಡೆಯಲು ಅವನು ಅರ್ಹನೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸಿ ತೀರ್ಮಾನಿಸಬೇಕಾಗುತ್ತದೆ. ಅದರಂತೆ ಪ್ರಸ್ತುತ ಪ್ರಕರಣದಲ್ಲಿ ಪ್ರಮುಖ ಸಾಕ್ಷಿಗಳು ಸಾಕ್ಷ್ಯ ನೀಡದೇ ಇದ್ದುದರಿಂದ ಖುಲಾಸೆಯಾಗಿರುತ್ತದೆ. ಆದ್ದರಿಂದ ಅವರನ್ನು ಸಂಪೂರ್ಣವಾಗಿ ದೋಷಮುಕ್ತರೆಂದು ನ್ಯಾಯಾಲಯವು ಪರಿಗಣಿಸಿಲ್ಲವೆಂದು ಇಲ್ಲಿ ಮನಗಂಡಿದೆ. ಈ ಹಿನ್ನೆಲೆಯಲ್ಲಿ ಅರ್ಜಿದಾರರ ವಾದಾಂಶಗಳಲ್ಲಿ ಯಾವುದೇ ಪರಿಗಣಿಸಬಹುದಾದ ಅಂಶಗಳಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 267 ಪೊಸಿಅ 2001, ಬೆಂಗಳೂರು, ದಿನಾಂಕ: 18ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಹೆಚ್. ನಾರಾಯಣ, ಸಿಪಿಸಿ 622 ಮತ್ತು ಶ್ರೀ ಟಿ.ಜಿ. ಕುಮಾರಸ್ವಾಮಿ, ಪಿಸಿ 89 ತುಮಕೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 684

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ವೆಂಕಟೇಶ್ ಶೆಟ್ಟಿ, ಪಿಎಸ್‌ಐ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಕೆ.ಜಿ.ಎಫ್. ರವರ ಆದೇಶ ಸಂಖ್ಯೆ: ಸಿಬ್ಬಂದಿ(1)/ಶಿಕ್ಷೆ/1/03-04 ಓಬಿ ಸಂಖ್ಯೆ: 17/03-04, ದಿನಾಂಕ: 9.5.2003.
2. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ರವರ ಆದೇಶ ಸಂಖ್ಯೆ: ಅಪೀಲು/20/2003-04, ಓಬಿ 86/03-04, ದಿನಾಂಕ: 9.10.2003.
3. ಅರ್ಜಿದಾರರ ಮನವಿ ದಿನಾಂಕ: 24.12.2003.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2) 6/2004, ದಿನಾಂಕ: 30.4.2004.

**ಪ್ರಸ್ತಾವನೆ:**

ಶ್ರೀ ವೆಂಕಟೇಶ್ ಶೆಟ್ಟಿ, ಪಿಎಸ್‌ಐ, ಬೆಂಗಳೂರು ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಶ್ರೀ ವೆಂಕಟೇಶ್ ಶೆಟ್ಟಿ, ಪಿಎಸ್‌ಐ ಆದ ನೀವು ಮಾರಿಕುಪ್ಪಂ ಪೊಲೀಸ್ ಠಾಣೆಯ (ಕಾ ಮತ್ತು ಸು) ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 22.3.2003 ರಂದು ಸುಮಾರು 10.30 ಗಂಟೆಗೆ ಕಿರುಭಾಕರನ್ ಎಂಬುವವರು ಸೌತ್‌ಗಿಲ್ಬರ್ಟ್ ಸಮೀಪ ಟಿ.ವಿ.ಎಸ್. ವಾಹನದಲ್ಲಿ ಹೋಗುತ್ತಿದ್ದಾಗ ಅಂಡ್ರಸನ್‌ಪೇಟೆ ವಾಸಿ ನಟರಾಜ್ ಎಂಬುವವರು ಯಮಹಾ ಗಾಡಿಯನ್ನು ಅತಿವೇಗದಿಂದ ಚಲಾಯಿಸಿಕೊಂಡು ಬಂದು ಕಿರುಭಾಕರನ್ ರವರ ಟಿವಿಎಸ್ ಗಾಡಿಗೆ ಡಿಕ್ಕಿ ಹೊಡೆದ ಕಾರಣ ಆತನ ಬಲಗಾಲಿಗೆ ತಗಲಿ ಮೂಳೆ ಮುರಿದಿರುತ್ತೆಂದು, ಈ ಬಗ್ಗೆ ಕೆ.ಜಿ.ಎಫ್.ನ ಜನರಲ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದು, ಆ ಸಮಯದಲ್ಲಿ ಆಸ್ಪತ್ರೆಯ ಮುಖ್ಯವೇದ ಪೆರುಮಾಳ್ ರವರು ಕಿರುಭಾಕರನ್ ರವರ ಹೇಳಿಕೆಯನ್ನು ಪಡೆದಿರುತ್ತಾರೆ. ನಂತರ ಕಿರುಭಾಕರನ್ ರವರ ಅಕ್ಕ ಶ್ರೀಮತಿ ಐ.ಮರ್ಸಿ ರವರು ಖುದ್ದು ನಿಮಗೆ ದೂರವಾಣಿ ಮೂಲಕ ಕೇಸು ದಾಖಲಿಸಲು ತಿಳಿಸಿದ್ದರೂ ಸಹಾ ಬರುತ್ತೇನೆಂದು ಹೇಳಿ ಆಸ್ಪತ್ರೆಗೆ ಬಾರದೇ, ಕೇಸು ದಾಖಲಿಸಿಕೊಳ್ಳದೇ ತೊಂದರೆ ನೀಡಿರುತ್ತೀರೆಂದು ಶ್ರೀಮತಿ ಐ. ಮರ್ಸಿ ರವರು ಪೊಲೀಸ್ ಉಪಾಧೀಕ್ಷಕರು, ಕೆಜಿಎಫ್ ರವರಿಗೆ ದಿನಾಂಕ:

28.3.2003 ರಂದು ಹೇಳಿಕೆ ನೀಡಿರುತ್ತಾರೆ. ಪೊಲೀಸ್ ಉಪಾಧೀಕ್ಷಕರು, ಕೆ.ಜಿ.ಎಫ್. ರವರು ತಮ್ಮ ವರದಿ ಸಂಖ್ಯೆ: ಸಿಸಿ/9/2003, ದಿನಾಂಕ: 28.3.2003 ರಲ್ಲಿ ದೂರವಾಣಿ ಮೂಲಕ ನಡೆದ ಘಟನೆ ಬಗ್ಗೆ ತಿಳಿಸಿದ್ದರೂ ಸಹಾ ಜನರಲ್ ಆಸ್ಪತ್ರೆಯ ಹೊರ ಠಾಣೆಯಿಂದ ಹೇಳಿಕೆಯನ್ನು ಪಡೆದುಕೊಂಡು ಕೇಸು ದಾಖಲಿಸದೆ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುವುದು."

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಸಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 1 ವರ್ಷಕಾಲ ಮುಂದೂಡಿ ಹೊರಡಿಸಿದ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲ್ಕಂಡ ಆದೇಶಗಳ ವಿರುದ್ಧ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು, ತನ್ನ ವಿರುದ್ಧ ದುರುದ್ದೇಶದಿಂದ ಡಿವೈಎಸ್‌ಪಿ ವರದಿ ಸಲ್ಲಿಸಿರುತ್ತಾರೆ. ತನ್ನನ್ನು ಪ್ರತಿರಕ್ಷಿಸಿಕೊಳ್ಳಲು ಅವಕಾಶ ನೀಡಿರುವುದಿಲ್ಲ. ಸಂಬಂಧಪಟ್ಟ ಕಡತ ತನಗೆ ನೀಡಿಲ್ಲ ಎಂದು ವಾದಿಸಿರುತ್ತಾರೆ. ಡಿವೈಎಸ್‌ಪಿ ರವರು ಯಾವ ರೀತಿ ದುರುದ್ದೇಶವನ್ನು ಪ್ರದರ್ಶಿಸಿರುವುದು ಕಂಡುಬರುತ್ತಿಲ್ಲ. ಅರ್ಜಿದಾರರು ಪ್ರಕರಣ ಒಂದರಲ್ಲಿ ಸೂಕ್ತ ಕ್ರಮ ಕೈಗೊಳ್ಳದಿದ್ದುದರಿಂದಲೇ ವರದಿ ಸಲ್ಲಿಸಿರುವುದು ಕಂಡುಬರುತ್ತದೆ. ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಿದ್ದು, ಯಾವುದೇ ದಾಖಲೆಗಳನ್ನು ನೀಡಬೇಕಾದ ಅವಶ್ಯಕತೆ ಇರುವುದಿಲ್ಲ. ಅರ್ಜಿದಾರರು ಎಸಗಿರುವ ತಪ್ಪಿಗೆ ತಕ್ಕ ದಂಡನೆಯನ್ನು ಶಿಸ್ತು ಪ್ರಾಧಿಕಾರಿ ವಿಧಿಸಿದ್ದು, ಹಸ್ತಕ್ಷೇಪ ಮಾಡುವ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 31 ಪೊಸಿಅ 2004, ಬೆಂಗಳೂರು, ದಿನಾಂಕ: 22ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೆಂಕಟೇಶ್‌ಶೆಟ್ಟಿ ಪಿಎಸ್‌ಐ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಪಿ.ಆರ್. 685
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಲ್.ಎಸ್. ಪ್ರಕಾಶ್, ಪಿಸಿ 209(1393), ಸಿಎಆರ್ (ಕೇಂದ್ರ) ಬೆಂಗಳೂರು ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಡೆಪ್ಯುಟಿ ಕಮೀಷನರ್ ಆಫ್ ಪೊಲೀಸ್, ಸಿಎಆರ್ (ಕೇಂದ್ರ) ಬೆಂಗಳೂರು ರವರ ಆದೇಶ ಸಂಖ್ಯೆ: ಡಿಇ/99/95-96, ದಿನಾಂಕ: 4.1.2000.
2. ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ರವರ ಆದೇಶ ಸಂಖ್ಯೆ: 51/ಅಪೀಲು/99-2000, ದಿನಾಂಕ: 22.1.2001.
3. ಅರ್ಜಿದಾರರ ಮನವಿ ದಿನಾಂಕ:
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (3)/2001-02, ದಿನಾಂಕ: 11.5.2004.

**ಪ್ರಸ್ತಾವನೆ:**

ಶ್ರೀ ಎಲ್.ಎಸ್. ಪ್ರಕಾಶ್, ಎಪಿಸಿ 209, ಸಿಎಆರ್ (ಕೇಂದ್ರ), ಬೆಂಗಳೂರು ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) "ಅವರ ಧರ್ಮಪತ್ನಿಯಾದ ಶ್ರೀಮತಿ ನಾಗರತ್ನಮ್ಮ ರವರನ್ನು ಸೀಮೆಎಣ್ಣೆ ಹಾಕಿ ಕೊಲೆ ಮಾಡಿದ ಮತ್ತು ವರದಕ್ಷಿಣೆ ಪಡೆದ" ಆರೋಪದ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ಇಲಾಖಾ ವಿಚಾರಣೆಯಲ್ಲಿ ವರದಕ್ಷಿಣೆ ಪಡೆದ ಆರೋಪವನ್ನುಳಿದು ಉಳಿದ ಆರೋಪಗಳು ಸಾಬೀತಾಗಿವೆ ಎಂಬ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿ ಗೊಳಿಸಿ ಆದೇಶ ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲದಿದ್ದರೂ ಸಹಾನುಭೂತಿ ತೋರಿಸಿ, ಮೇಲ್ಮನವಿ ಪ್ರಾಧಿಕಾರಿ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ ಅವರ ಮೂಲ ವೇತನವನ್ನು ಪಿಸಿ ಹುದ್ದೆಯ ಕನಿಷ್ಠಮಟ್ಟಕ್ಕೆ 5 ವರ್ಷಕಾಲ ಸಂಚಿತಪರಿಣಾಮವಾಗಿ ಇಳಿಸಿ ಆದೇಶ ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧವೂ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಇದನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಿದ್ದು, ಅವರ ಮುಖ್ಯ ವಾದಾಂಶಗಳು ಮತ್ತು ಚರ್ಚೆ ಈ ಕೆಳಕಂಡಂತಿವೆ.

**ವಾದಾಂಶ (1) :** ಆರೋಪ 3 ತಾವು ತಮ್ಮ ಪತ್ನಿಗೆ ಕಿರುಕುಳ ಕೊಡುತ್ತಿದ್ದ ಬಗ್ಗೆ ಮಾತ್ರ ಸಮಜಾಯಿಷಿ ಕೋರಲಾಗಿದೆ. ಮೃತರ ತಂದೆ ತಾಯಿ ಮತ್ತು ಸಹೋದರಿ ಮಾತ್ರ ತಮ್ಮ ವಿರುದ್ಧ ಹೇಳಿಕೆ ನೀಡಿದ್ದು, ಇದಕ್ಕೆ ಆಧಾರವಿಲ್ಲ.

**ಚರ್ಚೆ** : ಅರ್ಜಿದಾರರು ಕಿರುಕುಳ ನೀಡಿರುವುದಕ್ಕೆ ಮೃತಳ ತಂದೆ ತಾಯಿ ಮತ್ತು ಸಹೋದರಿ ಹೇಳಿಕೆಯೇ ಆಧಾರ. ಅರ್ಜಿದಾರರು ಕಿರುಕುಳ ನೀಡದೇ ಇದ್ದರೆ ಮೃತರು ಸಾಯುವ ಅವಶ್ಯಕತೆ ಇರಲಿಲ್ಲ. ಈ ವಾದ ನಿರಾಧಾರ.

**ವಾದಾಂಶ (2)** : ನ್ಯಾಯಾಲಯ ಈ ಸಂಬಂಧ ಕ್ರಿಮಿನಲ್ ಮೊಕದ್ದಮೆಯಲ್ಲಿ ತನ್ನನ್ನು ಖುಲಾಸೆ ಮಾಡಿದೆ.

**ಚರ್ಚೆ** : ನ್ಯಾಯಾಂಗ ಪ್ರಕ್ರಿಯೆ ಮತ್ತು ಇಲಾಖಾ ವಿಚಾರಣೆ ಪ್ರಕ್ರಿಯೆ ಬೇರೆ ಬೇರೆ. ಎರಡಕ್ಕೂ ತಳಕು ಹಾಕಲು ಬರುವುದಿಲ್ಲ. ಅರ್ಜಿದಾರರು ತಮ್ಮ ಪತ್ನಿಗೆ ಕಿರುಕುಳ ನೀಡಿರುವುದು ನಿಸ್ಸಂದೇಹವಾಗಿ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದ್ದು, ಇದಕ್ಕೆ ಪೂರಕವಾದ ಶಿಕ್ಷೆ ವಿಧಿಸಿದೆ.

**ವಾದಾಂಶ (3)** : ವಿಚಾರಣಾಧಿಕಾರಿ ಪಕ್ಷಪಾತ ಮಾಡಿರುತ್ತಾರೆ.

**ಚರ್ಚೆ** : ಯಾವ ರೀತಿ ಪಕ್ಷಪಾತ ಮಾಡಿದ್ದಾರೆ ಅನ್ನುವುದು ಖಚಿತಪಡಿಸಿಲ್ಲ. ಇದು ನಿರಾಧಾರ.

ಅರ್ಜಿದಾರರು ಎಸಗಿರುವ ತಪ್ಪಿಗೆ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆ ಅನುಗುಣವಾಗಿದ್ದರೂ, ಮೇಲ್ಮನವಿ ಪ್ರಾಧಿಕಾರಿ ಸಾಕಷ್ಟು ಅನುಕಂಪ ತೋರಿಸಿ ಸೇವೆಯಲ್ಲಿ ಪುನರ್‌ಸ್ಥಾಪಿಸಿದ್ದಾರೆ. ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 273 ಪೊಸಿಅ 2001, ಬೆಂಗಳೂರು, ದಿನಾಂಕ: 14ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಲ್.ಎಸ್. ಪ್ರಕಾಶ್, ಪಿಸಿ, ಸಿಎಆರ್ (ಕೇಂದ್ರ), ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 686

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಜಿ.ಹೆಚ್. ಸೋಮೇಗೌಡ, ಸಿಪಿಸಿ 184, ಚಿಕ್ಕಮಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಚಿಕ್ಕಮಗಳೂರು ಜಿಲ್ಲೆ ರವರ ಆದೇಶ ಸಂಖ್ಯೆ: ಡಿಇ/13/2002 ಓಬಿ ಸಂಖ್ಯೆ:244/2002, ದಿನಾಂಕ: 19.11.2002.
2. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು ರವರ ಆದೇಶ ಸಂಖ್ಯೆ: ಸಿಬ್ಬಂದಿ/ಮೇ/10/2003, ದಿನಾಂಕ: 14.6.2003.
3. ಅರ್ಜಿದಾರರ ಮನವಿ ದಿನಾಂಕ: 30.8.2003
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2) 79/2003-04, ದಿನಾಂಕ: 16.2.2004.

**ಪ್ರಸ್ತಾವನೆ:**

ಶ್ರೀ ಜಿ.ಹೆಚ್. ಸೋಮೇಗೌಡ, ಕಳಸ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಸಿಪಿಸಿ 184, ಜಿ.ಹೆಚ್. ಸೋಮೇಗೌಡ, ಕಡೂರು ಠಾಣೆ ಆದ ನೀವು ರೈಟರ್ ಆಗಿದ್ದು, ಪಿಎಸ್ಐ ಮತ್ತು ಕೆಳಮಟ್ಟದ ಪೊಲೀಸ್ ಅಧಿಕಾರಿಗಳಿಗೆ ಸರ್ಕಾರ ನೀಡುವ ಪಡಿತರ ವಿತರಣೆಗೆ ಸಂಬಂಧಿಸಿದ ಕೂಪನ್‌ಗಳನ್ನು ಅಕ್ರಮವಾಗಿ ಪ್ರಿಂಟ್ ಮಾಡಿಸಿ, ಠಾಣೆಯ ಸಿಬ್ಬಂದಿಗೆ ವಿತರಿಸಿ ಪಡಿತರ ಪಡೆಯಲು ಸಹಾಯ ಮಾಡಿದ ಬಗ್ಗೆ."

ಮೇಲ್ಕಂಡ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದ್ದರಿಂದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 3 ವರ್ಷಗಳ ಕಾಲ ಮುಂದೂಡಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲದಿದ್ದರೂ, ಅನುಕಂಪ ತೋರಿಸಿ, 3 ವರ್ಷದ ಬದಲಿಗೆ 1 ವರ್ಷಕಾಲ ವಾರ್ಷಿಕ ವೇತನಬಡ್ತಿಯನ್ನು ಮುಂದೂಡಿ ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧವೂ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು, ಅದನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಠಾಣಾ ಸಿಬ್ಬಂದಿ ಎಲ್ಲರೊಂದಿಗೆ ಸಮಾಲೋಚಿಸಿ, ಆಹಾರ ಕೂಪನ್‌ಗಳನ್ನು ಪಿಎಸ್ಐ ರವರ ಅನುಮತಿಯೊಂದಿಗೆ ಪ್ರಿಂಟ್ ಮಾಡಿಸಿದ್ದೇನೆ. ಇದರಿಂದ ಸರ್ಕಾರಕ್ಕೆ ನಷ್ಟವಾಗಿಲ್ಲ ಎಂದು ವಾದಿಸಿರುತ್ತಾರೆ. ಸರ್ಕಾರಕ್ಕೆ ಲಾಭವಾಗಲೀ ಅಥವಾ ನಷ್ಟವಾಗಲೀ ಸರ್ಕಾರದ ಅನುಮತಿ ಇಲ್ಲದೇ ತಾನೇ ಸ್ವತಃ ಪ್ರಿಂಟ್ ಮಾಡಿಸಿರುವುದು ಅಪರಾಧ ಇದಕ್ಕೆ ಶಿಸ್ತು ಪ್ರಾಧಿಕಾರಿ ವಿಧಿಸಿದ್ದ ಶಿಕ್ಷೆ ಸೂಕ್ತವಾಗಿದ್ದರೂ ಮೇಲ್ಮನವಿ ಪ್ರಾಧಿಕಾರಿ ಹೆಚ್ಚಿನ ಅನುಕಂಪ ತೋರಿಸಿ ಶಿಕ್ಷೆ ಕಡಿಮೆ ಮಾಡಿರುತ್ತಾರೆ. ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 96 ಪೊಸಿಅ 2004, ಬೆಂಗಳೂರು, ದಿನಾಂಕ: 15ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಹೆಚ್. ಸೋಮೇಗೌಡ, ಪಿಸಿ 184, ಚಿಕ್ಕಮಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 687

**ಕಂದಾಯ ಸಚಿವಾಲಯ**

**ವಿಷಯ:** M/s IMTMA ಸಂಸ್ಥೆಯು ಸ್ಥಾಪಿಸಲಿರುವ Centre of Excellence Exhibition Facility ಗೆ ಸಂಬಂಧಿಸಿದಂತೆ ಖರೀದಿಸಲಿರುವ ಜಮೀನಿಗೆ ತಗಲುವ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕದಲ್ಲಿ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಐಡಿಡಿ 219 ಐಡಿಎಂ 2003, ದಿನಾಂಕ: 18.9.2003.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 315 ಮುನೋಮು 2003, ದಿನಾಂಕ: 3.10.2003.
3. ವ್ಯವಸ್ಥಾಪಕ ನಿರ್ದೇಶಕರು, ಇಂಡಿಯನ್ ಮಷೀನ್ ಟೂಲ್ ಮ್ಯಾನುಫ್ಯಾಕ್ಚರರ್ಸ್ ಅಸೋಸಿಯೇಷನ್, ಬೆಂಗಳೂರು ಇವರ ಮನವಿ ದಿನಾಂಕ: 8.4.2004.

**ಪ್ರಸ್ತಾವನೆ:**

ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಇಲಾಖೆಯು ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ: 18.9.2003ರ ಆದೇಶದಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ನೀತಿಯಡಿಯಲ್ಲಿ ಮೆ: ಇಂಡಿಯನ್ ಮಷೀನ್ ಟೂಲ್ ಮ್ಯಾನುಫ್ಯಾಕ್ಚರರ್ಸ್ ಅಸೋಸಿಯೇಷನ್ (IMTMA) ರವರಿಗೆ infrastructure facility of machine tool design, training center, workshop and a large Convention-cum-Exhibition facility ಯನ್ನು ರೂ.78.00 ಕೋಟಿಗಳ ಬಂಡವಾಳದೊಂದಿಗೆ ಸ್ಥಾಪಿಸಲು ಹೊಂದುವ ಜಮೀನಿಗೆ ಮುದ್ರಾಂಕ ಶುಲ್ಕದಲ್ಲಿ ಶೇ.50 ರಷ್ಟು ವಿನಾಯಿತಿ ಹಾಗೂ ನೋಂದಣಿ ಶುಲ್ಕದಲ್ಲಿ ರೂ.1,000 ಕ್ಕೆ ರೂ.1.00 ರಂತೆ ನೋಂದಣಿ ಶುಲ್ಕದಲ್ಲಿ ವಿನಾಯಿತಿ ನೀಡಲು ಆದೇಶಿಸಿದೆ.

ಮೂಲಭೂತ ಸೌಲಭ್ಯಗಳ ಯೋಜನೆಯಡಿ ಈ ಪ್ರಸ್ತಾಪವು ಶೇಕಡಾ 50 ರಷ್ಟು ಮುದ್ರಾಂಕ ಶುಲ್ಕ ವಿನಾಯಿತಿಗೆ ಹಾಗೂ ಶೇಕಡಾ 50 ರಷ್ಟು ನೋಂದಣಿ ಶುಲ್ಕ ವಿನಾಯಿತಿಗೆ ಅರ್ಹವಾಗಿರುತ್ತದೆ. ದಿನಾಂಕ: 21.4.2003ರ ಉನ್ನತ ಮಟ್ಟದ ಸಮಿತಿ ಸಭೆಯಲ್ಲಿ ಮೂಲ ಭೂತ ಸೌಲಭ್ಯಗಳ ಯೋಜನೆಗಳಡಿ ಒದಗಿಸಲ್ಪಟ್ಟಿರುವ ವಿನಾಯಿತಿ / ರಿಯಾಯಿತಿಗೆ ಅನುಗುಣವಾಗಿ ವಿನಾಯಿತಿ ನೀಡಲು ಅನುಮೋದಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (2)ರ ದಿನಾಂಕ: 3.10.2003ರ ಆದೇಶದಲ್ಲಿ ಇಂಡಿಯನ್ ಮಷೀನ್ ಟೂಲ್ ಮ್ಯಾನುಫ್ಯಾಕ್ಚರರ್ಸ್ ಅಸೋಸಿಯೇಷನ್, ಬೆಂಗಳೂರು ಸಂಸ್ಥೆಯ ರೂ.3,07,97,500/- ಗಳ ಬೆಲೆಯಲ್ಲಿ ಖರೀದಿಸಿರುವ 30 ಎಕರೆ ಜಮೀನಿನ ನೋಂದಣಿ ಶುಲ್ಕದಲ್ಲಿ ಶೇ.50 ರಷ್ಟು ವಿನಾಯಿತಿಯನ್ನು ಮತ್ತು ಪ್ರತಿ ಸಾವಿರ ರೂಪಾಯಿಗಳಿಗೆ ರೂ.1.00 ರಂತೆ, ನೋಂದಣಿ ಶುಲ್ಕದಲ್ಲಿ ವಿನಾಯಿತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಉಲ್ಲೇಖ (3)ರ ದಿನಾಂಕ: 8.4.2004ರ ಮನವಿಯಲ್ಲಿ IMTMA ರವರು NICEL ರವರಿಂದ ಮಾದಾವಾರ ಗ್ರಾಮದ ಸರ್ವೆ ನಂ.38 ಕೆ.ಐ.ಎ.ಡಿ.ಬಿ. ಯಿಂದ ಪರಿವರ್ತನೆಗೊಂಡ ಎರಡು ಎಕರೆ ಹದಿನಾಲ್ಕು ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯುತ್ತಿದ್ದು ಮುದ್ರಾಂಕ ಶುಲ್ಕದಲ್ಲಿ ಶೇಕಡ 50 ರಿಯಾಯಿತಿ ಮತ್ತು ನೋಂದಣಿ ಶುಲ್ಕದಲ್ಲಿ ವಿನಾಯಿತಿ ನೀಡಬೇಕೆಂದು ಕೋರಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 193 ಮುನೋಮು 2004, ಬೆಂಗಳೂರು, ದಿನಾಂಕ: 7ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಇಂಡಿಯನ್ ಮಷೀನ್ ಟೂಲ್ ಮ್ಯಾನುಫ್ಯಾಕ್ಚರರ್ಸ್ ಅಸೋಸಿಯೇಷನ್, ಬೆಂಗಳೂರು ಸಂಸ್ಥೆಯು ಮಾದವಾರ ಗ್ರಾಮದ ಸರ್ವೆ ನಂ.28/1 ರಲ್ಲಿ ಎರಡು ಎಕರೆ ಮತ್ತು ಹದಿನಾಲ್ಕು ಗುಂಟೆ ಜಮೀನಿನ ನೋಂದಣಿಗೆ ತಗಲುವ ಮುದ್ರಾಂಕ ಹಾಗೂ ನೋಂದಣಿ ಶುಲ್ಕದಲ್ಲಿ ಶೇ.50 ರಷ್ಟು ವಿನಾಯಿತಿಯನ್ನು ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಕಲಂ 9ಎ(1)ರ ಪ್ರಕಾರ ಹಾಗೂ ನೋಂದಣಿ ಕಾಯ್ದೆ 1908ರ ಕಲಂ 78 ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: 4041/ಎಫ್, ದಿನಾಂಕ: 26.6.2003 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 703

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಬೆರಳಚ್ಚುಗಾರರ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ:** ಸಿಬ್ಬಂದಿ:2-ಲಿಪಿಕ:1:85:02-03 ದಿನಾಂಕ: 6.2.2003 ಆಯುಕ್ತರು, ಕೃಷಿ ಇಲಾಖೆ, ಬೆಂಗಳೂರು.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕೃಷಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ, ಕೃಷಿ ಇಲಾಖೆಯಲ್ಲಿ ಸುಮಾರು 20 ವರ್ಷಗಳಿಗಿಂತ ಮೇಲ್ಪಟ್ಟು ಬೆರಳಚ್ಚುಗಾರರ ಹುದ್ದೆಗಳು ತಾತ್ಕಾಲಿಕ ಹುದ್ದೆಗಳಾಗಿ ಮುಂದುವರಿಯುತ್ತಿದ್ದು, ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 58 ಎಸ್‌ಆರ್‌ಎಸ್ 79, ದಿನಾಂಕ: 27.9.1979ರ ಪ್ರಕಾರ ಐದು ವರ್ಷಗಳಿಗಿಂತ ಹೆಚ್ಚುಕಾಲ ಮುಂದುವರಿದಿರುವ ಯೋಜನೆಗಳನ್ನು ಹುದ್ದೆಗಳ ಸಹಿತ ಸಚಿವಾಲಯದ ಆಯಾ ಆಡಳಿತ ಇಲಾಖೆಗಳೇ ಖಾಯಂ ಹುದ್ದೆಗಳನ್ನಾಗಿ ಮಂಜೂರು ಮಾಡಬಹುದಾಗಿದೆ ಎಂದು ಸರ್ಕಾರವನ್ನು ಕೋರಿದ್ದಾರೆ.

ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಕೃಷಿ ಇಲಾಖೆಯಲ್ಲಿ ಒಟ್ಟು 440 ಬೆರಳಚ್ಚುಗಾರರ ಹುದ್ದೆಗಳು ಮಂಜೂರಾಗಿದ್ದು, ಅದರಲ್ಲಿ 63 ಹುದ್ದೆಗಳನ್ನು ಜಲಾನಯನ ಅಭಿವೃದ್ಧಿ ಇಲಾಖೆಗೆ ವರ್ಗಾಯಿಸಿದೆ. ಶೇ.5 ಹಾಗೂ ಶೇ.80 ಕಡಿತದಲ್ಲಿ 63 ಹುದ್ದೆಗಳು ರದ್ದಾಗಿರುತ್ತದೆ. ಈಗ ಕೃಷಿ ಇಲಾಖೆಯಲ್ಲಿ 314 ಹುದ್ದೆಗಳು ಉಳಿದಿರುತ್ತವೆ. ಇದರಲ್ಲಿ 17 ಖಾಯಂ ಹುದ್ದೆಗಳಾಗಿರುತ್ತವೆ. ಈಗ ಉಳಿದಿರುವ 297 ತಾತ್ಕಾಲಿಕ ಹುದ್ದೆಗಳು ಸುಮಾರು 20 ವರ್ಷಗಳಿಗಿಂತ ಮುಂದುವರಿಯುತ್ತಿದ್ದು, ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 58 ಎಸ್‌ಆರ್‌ಎಸ್ 79, ದಿನಾಂಕ: 27.9.1979ರ ಪ್ರಕಾರ ಖಾಯಂಗೊಳಿಸಬಹುದಾಗಿರುವುದರಿಂದ ಕೃಷಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 103 ಕೃವಸೆ 2004, ದಿನಾಂಕ: 30ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಕೃಷಿ ಇಲಾಖೆಯಲ್ಲಿಯ 297 ತಾತ್ಕಾಲಿಕ ಹುದ್ದೆಗಳಲ್ಲಿ ಶೇಕಡಾ 50 ರಷ್ಟು ಹುದ್ದೆಗಳನ್ನು ಅಂದರೆ 148 ಬೆರಳಚ್ಚುಗಾರರ ಹುದ್ದೆಗಳನ್ನು ಆದೇಶ ಸಂಖ್ಯೆ: ಎಫ್‌ಡಿ 58 ಎಸ್‌ಆರ್‌ಎಸ್ 79 ದಿನಾಂಕ: 27.9.1979ರ ಪ್ರಕಾರ ಖಾಯಂ ಹುದ್ದೆಗಳನ್ನಾಗಿ ಪರಿವರ್ತಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 704 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ವಿಷಯ:** ಕೃಷಿ ಇಲಾಖೆ ಬೆರಳಚ್ಚುಗಾರರ ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗಳಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1) ಸಂಖ್ಯೆ: ಸಿಬ್ಬಂದಿ 2-ಲಿಪಿಕ:1:85:02-03, ದಿನಾಂಕ: 6.2.2003 ಆಯುಕ್ತರು, ಕೃಷಿ ಇಲಾಖೆ, ಬೆಂಗಳೂರು.

2) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 103 ಕೃವಸೆ 2004, ದಿನಾಂಕ: 30.6.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕೃಷಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಹೆಚ್ಚಿನ ಬೆರಳಚ್ಚುಗಾರರು ಎರಡು ದಶಕಗಳಿಗೂ ಮೀರಿದ ಸೇವೆಯನ್ನು ಸಲ್ಲಿಸಿರುತ್ತಾರೆ. ಜೊತೆಗೆ ಈ ಬೆರಳಚ್ಚುಗಾರರು ಆಧುನಿಕ ತಾಂತ್ರಿಕತೆಗೆ ಅನುಗುಣವಾಗಿ ಕಂಪ್ಯೂಟರ್ ನಿರ್ವಹಣೆಯನ್ನು ಕಲಿತು ಇಲಾಖೆಯ ದಿನನಿತ್ಯದ ಕೆಲಸಗಳನ್ನು ಕಂಪ್ಯೂಟರ್ ನಲ್ಲಿಯೇ ನಿರ್ವಹಿಸುತ್ತಿದ್ದಾರೆ. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 66 ಎಸ್‌ಆರ್‌ಎಸ್ 81, ದಿನಾಂಕ: 17.12.81ರ ಆದೇಶದ ಮೂಲಕ ಯಾವುದೇ ಇಲಾಖೆಯಲ್ಲಿ ಹತ್ತು ವರ್ಷಗಳಿಗಿಂತ ಹೆಚ್ಚಿನ ಸೇವೆ ಸಲ್ಲಿಸಿರುವ ಮತ್ತು ಬೆರಳಚ್ಚುಗಾರರ ವೃಂದದಲ್ಲಿಯೇ ಮುಂದುವರಿಯುವ ಒಪ್ಪಿಗೆ ಕೊಟ್ಟಿರುವ ಬೆರಳಚ್ಚುಗಾರರಿಗೆ ಇಲಾಖೆಯಲ್ಲಿರುವ ಒಟ್ಟು ಖಾಯಂ ಬೆರಳಚ್ಚುಗಾರರ ಹುದ್ದೆಗಳ ಶೇ.20ರ ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗಳನ್ನಾಗಿ ಮೇಲ್ದರ್ಜೆಗೆ ಏರಿಸಿ ಬಡ್ತಿ ನೀಡಲು ಆದೇಶಿಸಿದ್ದು, ಅದರಂತೆ ಶೇ.20 ರಷ್ಟು ಬೆರಳಚ್ಚುಗಾರರ ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗಳನ್ನು ಮೇಲ್ದರ್ಜೆಗೆ ಏರಿಸಿ ಮಂಜೂರಾತಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕೃಷಿ ಇಲಾಖೆಯಲ್ಲಿಯೇ 148 ಬೆರಳಚ್ಚುಗಾರರ ಹುದ್ದೆಗಳನ್ನು ಖಾಯಂಗೊಳಿಸಲಾಗಿರುತ್ತದೆ. ಕೃಷಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಖಾಯಂಗೊಳಿಸಿದ 148 ಬೆರಳಚ್ಚುಗಾರರ ಹುದ್ದೆಗಳ ಶೇ.20 ರಷ್ಟು ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗಳನ್ನಾಗಿ ಮೇಲ್ದರ್ಜೆಗೆ ಏರಿಸಲು ಈ ಕೆಳಕಂಡ ಆದೇಶ ಹೊರಡಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 103 ಕೃವಸ 2004, ದಿನಾಂಕ: 30ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 66 ಎಸ್‌ಆರ್‌ಪಿ 81, ದಿನಾಂಕ: 17.12.81ರ ಪ್ರಕಾರ ಕೃಷಿ ಇಲಾಖೆಯಲ್ಲಿನ 148 ಬೆರಳಚ್ಚುಗಾರರ ಖಾಯಂ ಹುದ್ದೆಗಳಲ್ಲಿ ಶೇ.20 ರಷ್ಟು ಹುದ್ದೆಗಳನ್ನು ಅಂದರೆ 30 ಹಿರಿಯ ಬೆರಳಚ್ಚುಗಾರರ ಹುದ್ದೆಗಳನ್ನಾಗಿ ವೇತನ ಶ್ರೇಣಿ 3850-7050 ರಲ್ಲಿ ಮೇಲ್ದರ್ಜೆಗೆ ಏರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 706 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇದರ 2004-05ನೇ ಸಾಲಿಗೆ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರೂ.25.00 ಲಕ್ಷಗಳನ್ನು ಮಂಜೂರು ಮಾಡಿ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 109 ಎಸ್‌ಜಿಎಫ್ 02(ಭಾ) ದಿನಾಂಕ: 13.02.2004.

2. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ:ಇಎಸ್‌ಟಿ 24/ 2003-04, ದಿನಾಂಕ: 07.06.2004.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿನ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಯನ್ನು ಬೆಳಗಾಂನಲ್ಲೂ ಮತ್ತು ಅದರ ಕೇಂದ್ರವೊಂದನ್ನು ಮಂಡ್ಯದಲ್ಲಿ ಸ್ಥಾಪಿಸುವ ಉದ್ದೇಶಕ್ಕಾಗಿ 2003-04ನೇ ಸಾಲಿನ ಆರ್ಥಿಕ ವರ್ಷದಲ್ಲಿ ರೂ.25.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2852-08-201-0-04 ರಡಿಯಲ್ಲಿ ಸಂಸ್ಥೆಗೆ ಬೇಕಾದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಸಲುವಾಗಿ ವೆಚ್ಚ ಮಾಡುವ ನಿಬಂಧನೆಗೊಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಉಲ್ಲೇಖ (2) ರಲ್ಲಿರುವ ಪತ್ರದ ಪ್ರಸ್ತಾವನೆಯಲ್ಲಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆಯು 2004-05ನೇ ಸಾಲಿಗೆ ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕಾರ್ಯಗತಗೊಳಿಸುವ ಸಲುವಾಗಿ ಹಣಕಾಸಿನ ಅವಶ್ಯಕತೆಯಿದೆ ಎಂದು ಸರ್ಕಾರವು ಕರ್ನಾಟಕ ಸಕ್ಕರೆ ಸಂಸ್ಥೆಗೆ ನಿರ್ದೇಶನಾಲಯದ ಮುಖಾಂತರ ರೂ.50.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2852-08-201-0-01 ಅಡಿಯಲ್ಲಿ ಕಾಯ್ದಿರಿಸಿದ್ದು ಸದರಿ ಹಣವನ್ನು ಮಂಜೂರು ಮಾಡಿ ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿದ್ದಾರೆ.

1. ಬೆಳಗಾವಿ ನಗರ ಹೊರವಲಯದಲ್ಲಿ ಬೆನಕನಹಳ್ಳಿ ಗ್ರಾಮದ ಹತ್ತಿರ 45 ಎಕರೆ ಜಮೀನನ್ನು ಅಭಿವೃದ್ಧಿಗೊಳಿಸಿ, ಕಬ್ಬು ಸಂಶೋಧನಾ ಹಾಗೂ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೆತ್ತಿಕೊಂಡು ಉತ್ತಮ ತಳಿಯ ಕಬ್ಬಿನ ಬೀಜಗಳನ್ನು ಉತ್ಪಾದಿಸುವಿಕೆ.

2. ವಿವಿಧ ಸಮ್ಮೇಳನಗಳನ್ನು ಕಾರ್ಯಾಗಾರಗಳನ್ನು, ತರಬೇತಿ ಶಿಬಿರಗಳನ್ನು ಕಬ್ಬು ಬೆಳೆಗಾರರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳ ನೌಕರರಿಗೆ ಕಾಲಕಾಲಕ್ಕೆ ಏರ್ಪಡಿಸುವುದು ಹಾಗೂ ಅವರುಗಳಿಗೆ ಅತ್ಯಾಧುನಿಕ ತಂತ್ರಜ್ಞಾನ ಇತ್ಯಾದಿಗಳನ್ನು ಪೂರೈಸುವುದು.

3. ಕಬ್ಬು ಅಭಿವೃದ್ಧಿ ಕುರಿತು, ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸುವುದು.

4. ಸಕ್ಕರೆ ಸಂಸ್ಥೆ ತನ್ನ ಧ್ಯೇಯ ಧೋರಣೆಗಳನ್ನು ಪೂರೈಸಲು ಅವಶ್ಯವಿರುವ ವಿವಿಧ ಕಟ್ಟಡಗಳ ಹಾಗೂ ಪ್ರಯೋಗಾಲಯಗಳ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಳ್ಳುವುದು.

5. ರೈತರ ಹೊಲದ ಮಣ್ಣು ಸಕಾಲದಲ್ಲಿ ಪರೀಕ್ಷಿಸಿ, ಕಬ್ಬು ಬೆಳೆಯಲು ಯೋಗ್ಯವಿದ್ದ ಬಗ್ಗೆ ತಾಂತ್ರಿಕ ಮಾಹಿತಿ ಒದಗಿಸಲು ಮಣ್ಣು ಪರೀಕ್ಷೆ ಪ್ರಯೋಗಾಲಯಗಳನ್ನು ಸ್ಥಾಪಿಸುವುದು.

6. ಆರ್ಥಿಕವಾಗಿ ತೊಂದರೆಯಲ್ಲಿರುವ ಸಕ್ಕರೆ ಕಾರ್ಖಾನೆಗಳ ಅಧ್ಯಯನ ನಡೆಸಿ, ಅವುಗಳ ಪ್ರಗತಿಗೋಸ್ಕರ ಕಾರ್ಯಕ್ರಮ ರೂಪಿಸಿ, ಅನುಷ್ಠಾನಗೊಳಿಸುವುದು.

7. ಈ ಎಲ್ಲಾ ಚಟುವಟಿಕೆಗಳನ್ನು ಪೂರೈಸಲು ಅವಶ್ಯಕವಿರುವ ಅನುಭವಿ ಹಾಗೂ ತಾಂತ್ರಿಕ ಸಿಬ್ಬಂದಿಗಳ ಸೇವೆಯನ್ನು ಎರವಲು ಸೇವೆಯ ಮೇಲೆ ಅಥವಾ ಗುತ್ತಿಗೆ ಆಧಾರದ ಮೇಲೆ ಪಡೆಯುವುದು.

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ದಿನಾಂಕ: 07.06.2004ರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 112 ಎಸ್‌ಜಿಎಫ್ 04, ಬೆಂಗಳೂರು, ದಿನಾಂಕ: 1ನೇ ಜುಲೈ 2004**

ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ ರವರು ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಸದರಿ ಸಂಸ್ಥೆಗೆ 2004-05ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852-08-201-0-01-106ರ ಅಡಿಯಲ್ಲಿ ರೂ.25.00 ಲಕ್ಷ (ರೂಪಾಯಿ ಇಪ್ಪತ್ತೈದು ಲಕ್ಷ ಮಾತ್ರ) ಗಳನ್ನು ಅನುದಾನವಾಗಿ ಬಿಡುಗಡೆ ಮಾಡಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಮೇಲು ರುಜುವನ್ನು ಪಡೆದು ಸದರಿ ಹಣವನ್ನು ಖಜಾನೆಯಿಂದ ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ರವರಿಗೆ ನೀಡಲಾಗಿದೆ.

ಈ ಆದೇಶವನ್ನು ಕಡತ ಸಂಖ್ಯೆ: ಸಿಐ 64 ಎಸ್‌ಜಿಎಫ್ 04 ರಲ್ಲಿನ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/655/ವೆಚ್ಚ-1/ 2004, ದಿನಾಂಕ: 18.06.04ರ ಮತ್ತು ಆಂತರಿಕ ಆರ್ಥಿಕ ಸಲಹೆಗಾರರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಟಿಪ್ಪಣಿ ಸಂಖ್ಯೆ: ಸಿಐ 352 ಐಎಫ್‌ಎ (1) 04 ದಿನಾಂಕ: 28.06.2004 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/1/ ಟಿಎಫ್‌ಪಿ/2003, ದಿನಾಂಕ: 12.06.2003 ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಕೈ.ಅ.) ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

ಪಿ.ಆರ್. 709

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕ್ಲರ್ಕ್ ಕಮ್ ಟೈಪಿಸ್ಟ್ ಮತ್ತು ಜವಾನ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ವನಇ 666 ಟಿಟಿಪಿ 88, ದಿನಾಂಕ: 18.09.1991.
2. ಸರ್ಕಾರದ ಆದೇಶ ಸಂಖ್ಯೆ: ವನಇ 487 ಟಿಟಿಪಿ 92, ದಿನಾಂಕ: 15.02.1993 ಮತ್ತು 22.12.1993.
3. ಸರ್ಕಾರದ ಆದೇಶ ಸಂಖ್ಯೆ: ವನಇ 173 ಎಂಐಬಿ 97, ದಿನಾಂಕ: 27.01.1998.
4. ಸರ್ಕಾರದ ಆದೇಶ ಸಂಖ್ಯೆ: ವನಇ 128 ಅಪ್ರಾಸೇ 98, ದಿನಾಂಕ: 03.11.1998.
5. ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ: ಉನಪ್ರಾ:ಸಿಬ್ಬಂದಿ:3863, 2003-04, ದಿ: 1.3.2004.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ 1ರ ಆದೇಶ ದಿನಾಂಕ: 18.09.1991 ರಲ್ಲಿ ಉಡುಪಿ - ಮಲ್ಪೆ ನಗರ ಯೋಜನಾ ಪ್ರಾಧಿಕಾರಕ್ಕೆ ಎರಡನೇ ದರ್ಜೆ ಗುಮಾಸ್ತ ಕಮ್ ಬೆರಳಚ್ಚುಗಾರ ಹಾಗೂ ಜವಾನ ಹುದ್ದೆಯನ್ನು ದಿನಾಂಕ: 18.09.1991 ರಿಂದ 1 ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿತ್ತು. ಮೇಲೆ ಉಲ್ಲೇಖದ ತದನಂತರದ ಸರ್ಕಾರಿ ಆದೇಶ ದಿನಾಂಕ: 15.02.1993, 22.12.1993, 27.01.1998 ಹಾಗೂ 03.11.1998 ರಲ್ಲಿ ಸದರಿ ಹುದ್ದೆಯನ್ನು 17.09.1999 ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: 5ರ ಪತ್ರ ದಿನಾಂಕ: 01.03.2004 ರಲ್ಲಿ ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು ಸರ್ಕಾರಕ್ಕೆ ಕಳುಹಿಸಿರುವ ಪ್ರಸ್ತಾವನೆಯಲ್ಲಿ ಸದರಿ 2 ಹುದ್ದೆಗಳು ಪ್ರಾಧಿಕಾರಕ್ಕೆ ಅಗತ್ಯವಿರುವುದರಿಂದ ದಿನಾಂಕ: 17.09.1999 ರಿಂದ ಈ ಹುದ್ದೆಯನ್ನು ಮುಂದುವರಿಸುವಂತೆ ಕೋರಿರುತ್ತಾರೆ ಹಾಗೂ 18.09.1999 ರಿಂದ ವೇತನ ಪಾವತಿ ಮಾಡಿರುವುದಕ್ಕೆ ಘಟನೋತ್ತರ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 148 ಮೈಅಪ್ರಾ 2004, ಬೆಂಗಳೂರು, ದಿನಾಂಕ: 21ನೇ ಜೂನ್ 2004**

ಸರ್ಕಾರದ ಆದೇಶ ಸಂಖ್ಯೆ: ವನಇ 666 ಟಿಟಿಪಿ 88, ದಿನಾಂಕ: 18.09.1991 ರಲ್ಲಿ ಉಡುಪಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾಗಿರುವ ಒಂದು ಎರಡನೇ ದರ್ಜೆ ಗುಮಾಸ್ತ ಕಮ್ ಬೆರಳಚ್ಚುಗಾರ ಹಾಗೂ ಒಂದು ಜವಾನ ಹುದ್ದೆಯನ್ನು ದಿನಾಂಕ: 18.09.1999 ರಿಂದ 17.09.2004 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ ಹಾಗೂ ದಿನಾಂಕ: 18.09.1999 ರಿಂದ ವೇತನ ಪಾವತಿಸಿರುವುದಕ್ಕೆ ಘಟನೋತ್ತರ ಮಂಜೂರಾತಿಯನ್ನು ನೀಡಲಾಗಿದೆ. ಪ್ರಾಧಿಕಾರವು ಇನ್ನು ಮುಂದೆ ಸರ್ಕಾರಕ್ಕೆ ಸಕಾಲದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಪಿ.ಆರ್. 710 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ನೀರಿನ ಬ್ಯಾಕ್ಟೀರಿಯಾಲಾಜಿಕಲ್ ವಿಶ್ಲೇಷಣೆ ಶುಲ್ಕ ನಿಗದಿಪಡಿಸಲು ಹಾಗೂ ನೀರಿನ ವಿಶ್ಲೇಷಣೆ ಶುಲ್ಕವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆಯವರೊಂದಿಗೆ ಅಂತ್ಯಗೊಂಡಿರುವ ಪತ್ರ ವ್ಯವಹಾರದ ಪತ್ರ ಸಂಖ್ಯೆ: ಗಭೂಇ/ರಾಪ್ರಶಾ/2003-04/3368, ದಿನಾಂಕ: 06.03.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರು ತಿಳಿಸಿರುವಂತೆ ನೀರಿನ ವಿಶ್ಲೇಷಣೆ ದರಗಳು ಸುಮಾರು ಹನ್ನೊಂದು ವರ್ಷಗಳ ಹಳೆಯ ದರವಾಗಿದ್ದು ಈ ಮಧ್ಯೆ ರಸಾಯನ ವಿಶ್ಲೇಷಣೆಗೆ ಉಪಯೋಗಿಸುವ ರಸಾಯನ ವಸ್ತುಗಳ ಹಾಗೂ ಇಂಧನ ಮತ್ತು ವಿದ್ಯುತ್ ದರಗಳಲ್ಲಿ ಅತೀವ ಹೆಚ್ಚಳ ಆಗಿರುವುದರಿಂದ ಪ್ರಸಕ್ತ ವಿಶ್ಲೇಷಣೆ ದರಗಳು ಅತೀ ಕಡಿಮೆಯಾಗಿದ್ದು ಇವುಗಳ ಪರಿಷ್ಕೃತ ದರ ನಿಗದಿಪಡಿಸುವಂತೆಯೂ ಮತ್ತು ನೀರಿನ ಬ್ಯಾಕ್ಟೀರಿಯಾಲಾಜಿಕಲ್ ವಿಶ್ಲೇಷಣೆ ಹಾಗೂ ನೀರಿನ ಬಿ.ಒ.ಡಿ. ಮತ್ತು ಸಿ.ಒ.ಡಿ. ವಿಶ್ಲೇಷಣೆಯ ದರ ನಿಗದಿಪಡಿಸಲು ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 02 ಅಜಅ 2002, ಬೆಂಗಳೂರು, ದಿನಾಂಕ: 29ನೇ ಜೂನ್ 2004**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಕೈಗೊಳ್ಳುವ ನೀರಿನ ವಿಶ್ಲೇಷಣೆ ದರಗಳಲ್ಲಿ ಈ ಕೆಳಕಂಡಂತೆ ಪರಿಷ್ಕರಣೆ ಮಾಡಿ ಮತ್ತು ಕೆಲವು ನೀರಿನ ವಿಶ್ಲೇಷಣೆ ದರವನ್ನು ಹೊಸದಾಗಿ ನಿಗದಿಪಡಿಸಿದೆ:

| | | ಈಗಿರುವ ದರ | ಪರಿಷ್ಕೃತ ದರ |
|---|---|---|---|
| 1) | ನೀರಿನ ಪೂರ್ಣ ವಿಶ್ಲೇಷಣೆ | ರೂ.150/- | ರೂ.250/- |
| 2) | ನೀರಿನ ಪ್ರತಿಘಟಕ ವಿಶ್ಲೇಷಣೆ | ರೂ.30/- | ರೂ.50/- |
| | | ಹೊಸದಾಗಿ ನಿಗದಿಪಡಿಸಿದ ದರ | |
| 1) | ನೀರಿನ ಬ್ಯಾಕ್ಟೀರಿಯಾಲಾಜಿಕಲ್ ವಿಶ್ಲೇಷಣೆ | ರೂ.150/- | |
| 2) | ನೀರಿನ ಬಿ.ಒ.ಡಿ. ಮತ್ತು ಸಿ.ಒ.ಡಿ. ವಿಶ್ಲೇಷಣೆ | ರೂ.150/- | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 643/ವೆಚ್ಚ-1/2004, ದಿನಾಂಕ: 08.06.2004 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್. ಮಂಜುನಾಥ**
ಪಿ.ಆರ್. 712 ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## INFRASTRUCTURE DEVELOPMENT SECRETARIAT

**Subject:** Development of Gulbarga Airport-release of additional funds.

**Read:** 1. G.O.No. IDD 24 DIA 2003, dated: 2.1.2003.
2. Note dated: 27.4.2004 of ACS & PRS, IDD to FD.
3. UO Note No.FD/557/Exp.1/2004, Dated: 11.6.2004 of the FD

**PREAMBLE** :

1. In the Government order read at (1) above, sanction was accorded to acquire 567 acres on land at srinivas Saradagi Village for development of an airport at Gulbarga.

2. Keeping in view the commitment made in the Budget Speech of the then Chief Minister on 5.2.2004 regarding establishment of new airport at Gulbarga, Finance Department was requested to release the assured sum of Rs.2.5 crores vide note dated: 27.4.2004 (read at Sl.No.2).

3. Finance Department in its U.O.Note dated: 11.6.2004 has agreed to release Rs.2.50 crores (read at Sl.No.8). Hence, this order.

**Government Order No: IDD 24 DIA 2000, Bangalore, Dated: 30th June 2004.**

1. Government are pleased to release a sum of Rs.2.50 crores (Rupees Two Crores and Fifty Lakhs only) towards the full and final payment of the cost of land acquisition of 567 acres at Srinivasa Saradagi village for development of an Airport at Gulbarga.

2. This amount shall be drawn in 2 tranches, with the first tranche of Rs.1.00 crore to be drawn immediately and the second tranche of Rs.1.5 crore to be drawn after completely utilizing the first tranche.

3. The expenditure towards the above shall be met out of the current years budget under the Head of Account "5465-01-190-1-05 (Plan) - Development of Minor Airports-Investments (Plan)".

4. The Deputy Commissioner, Gulbarga, is authorised to draw the said amount on Payee's Receipt duly countersigned by the Under Secretary to Government, Infrastructure Development Department and deposit the same with the CEO & EM, KIADB Bangalore.

5. This order issues with the concurrence of Finance Department vide its U.O. Note No. FD 557 Exp.1/2004 dated: 11.6.2004.

By Order and in the Name of the Governor of Karnataka,
**T.B. RENUKA PRASAD**
PR-714 Under Secretary to Government,
Infrastructure Development Department.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸಿ. ಬಸವರಾಜು, ಹಿಂದಿನ ಉಪ ನೋಂದಣಾಧಿಕಾರಿಗಳು, ಜಯನಗರ ಹಾಗೂ ಹಾಲಿ ತಹಶೀಲ್ದಾರರು, ಪಾವಗಡ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣಾ ನಡೆಸುವ ಬಗ್ಗೆ.

**ಓದಲಾಗಿದೆ:** 1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರ ಪತ್ರ ಸಂಖ್ಯೆ: ಇ.ವಿ.(2)-7:2000-01, ದಿನಾಂಕ: 29.6.2001.
2. ಶ್ರೀ ಸಿ. ಬಸವರಾಜು ಇವರಿಗೆ ನೀಡಲಾದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಕಂಇ 42 ಮುನೋಸೇ (2) 2001, ದಿನಾಂಕ: 01.08.2001.
3. ಶ್ರೀ ಸಿ. ಬಸವರಾಜು ಇವರು ಕಾರಣ ಕೇಳುವ ಸೂಚನಾ ಪತ್ರಕ್ಕೆ ಸರ್ಕಾರಕ್ಕೆ ಸಲ್ಲಿಸಿರುವ ಲಿಖಿತ ಉತ್ತರದ ದಿನಾಂಕ: 08.01.2001.
4. ನೋಂದಣಿ ಮಹಾಪರೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರ ಪತ್ರ ಸಂಖ್ಯೆ: ಇವಿ(2)-7:2000-01, ದಿನಾಂಕ: 12.06.2003 ಮತ್ತು 10.3.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ರವರು ಸಲ್ಲಿಸಿರುವ ವರದಿಯಲ್ಲಿ ಶ್ರೀ ಸಿ. ಬಸವರಾಜು, ಹಾಲಿ ತಹಶೀಲ್ದಾರ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಆದ ಇವರು ಈ ಹಿಂದೆ ಜಯನಗರ ಉಪ ನೋಂದಣಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ದಿನಾಂಕ: 1.4.1996 ರಿಂದ 10.9.1996ರ ಅವಧಿಯಲ್ಲಿ, ಜಯನಗರ ಉಪ ನೋಂದಣಿ ಕಛೇರಿಯಲ್ಲಿ 18 ದಸ್ತಾವೇಜುಗಳನ್ನು ನೋಂದಣಿ ಮಾಡುವಲ್ಲಿ ನಿಯಮಗಳನ್ನು ಉಲ್ಲಂಘಿಸಿ ಕಾನೂನು

ಬಾಹಿರವಾಗಿ ನೋಂದಣಿ ಮಾಡಿರುವುದರಿಂದ ಸರ್ಕಾರಕ್ಕೆ ಸುಮಾರು ರೂ.1,27,835-00 (ಒಂದು ಲಕ್ಷದ ಇಪ್ಪತ್ತೇಳು ಸಾವಿರದ ಎಂಟು ನೂರ ಮುವತ್ತೈದು) ಗಳಷ್ಟು ರಾಜಸ್ವ ನಷ್ಟ ಉಂಟಾಗಿರುವುದಾಗಿ ವರದಿ ಮಾಡಿದ್ದು, ಸಂಬಂಧಿಸಿದ ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕೋರಿದ್ದರು.

ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ರವರ ದಿನಾಂಕ: 29.6.2001ರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಶ್ರೀ ಸಿ. ಬಸವರಾಜು, ಹಾಲಿ ತಹಶೀಲ್ದಾರ್, ಪಾವಗಡ ತಾಲ್ಲೂಕು ಹಾಗೂ ಹಿಂದಿನ ಉಪ ನೋಂದಣಾಧಿಕಾರಿ, ಜಯನಗರ ಉಪ ನೋಂದಣಿ ಕಛೇರಿ ಇವರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ದೃಢಪಟ್ಟಿದ್ದು, ಸದರಿ ಅಧಿಕಾರಿಯವರು ಜಯನಗರ ಉಪ ನೋಂದಣಿ ಕಛೇರಿಯಲ್ಲಿ ಉಪ ನೋಂದಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ ದುರ್ನಡತೆಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11ರ ಪ್ರಕಾರ ಶಿಸ್ತಿನ ಕ್ರಮ ಜರುಗಿಸಲು ನಿರ್ಣಯಿಸಿ ಮೇಲೆ ಓದಲಾದ (2) ರಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲಾಗಿತ್ತು. ಮೇಲೆ ಓದಲಾದ (3) ರಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಸಿ. ಬಸವರಾಜು, ಹಿಂದಿನ ಉಪ ನೋಂದಣಾಧಿಕಾರಿ ಅವರು ನೀಡಿರುವ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸಿರುವುದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11ರಡಿ ನಿಯಮ 10-ಕ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 42 ಮುನೋಸೇ(2) 2001, ಬೆಂಗಳೂರು, ದಿನಾಂಕ: 28ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ. ಬಸವರಾಜು, ಹಾಲಿ ತಹಶೀಲ್ದಾರ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಮತ್ತು ಹಿಂದಿನ ಉಪ ನೋಂದಣಾಧಿಕಾರಿ, ಜಯನಗರ ಉಪ ನೋಂದಣಿ ಕಛೇರಿ ಇವರ ವಿರುದ್ಧ ಮೇಲೆ ಉಲ್ಲೇಖಿಸಿರುವಂತೆ ಕಂಡು ಬಂದಿರುವ ಲೋಪ ದೋಷಗಳು ಆರೋಪಿತ ದುರ್ನಡತೆಯ ಬಗ್ಗೆ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮ, 1957ರ ನಿಯಮ 11ನ್ನು ನಿಯಮ 10-ಕ ರೊಂದಿಗೆ ಉಪಬಂದಿಸಿರುವಲ್ಲಿ ನಿಹಿತವಾಗಿರುವಂತೆ, ಇಲಾಖಾ ವಿಚಾರಣೆ ನಡೆಸಲು ಶ್ರೀ ಈಶ್ವರ್ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶ್ರೀ ಕೆ.ಆರ್. ರೇಣುಕಾ ಪ್ರಸಾದ್, ಕೇಂದ್ರ ಸ್ಥಾನ ಸಹಾಯಕರು (ಆಡಳಿತ), ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿದೆ.

ವಿಚಾರಣೆಯನ್ನು 6 ತಿಂಗಳೊಳಗಾಗಿ ಪೂರೈಸಿ, ಸರ್ಕಾರಕ್ಕೆ ಅಂತಿಮ ವರದಿ ಸಲ್ಲಿಸಲು ಆದೇಶಿಸಿದೆ. ಷರತ್ತಿನ ಪ್ರಕಾರ ಸಂಭಾವನೆ ಮೊತ್ತ ರೂ.5,000-00 (ಐದು ಸಾವಿರ) ಗಳನ್ನು ವಿಚಾರಣಾಧಿಕಾರಿಗಳಿಗೆ ಪಾವತಿಸಲು ಸರ್ಕಾರವು ಮಂಜೂರಾತಿ ನೀಡಿದೆ. ಸದರಿ ವೆಚ್ಚವನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ವೇತನ ಲೆಕ್ಕ ಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 713 ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿ ಉನ್ನತೀಕರಿಸಲಾದ ಉಪ ಕಾರ್ಯದರ್ಶಿ (ಸೇವೆಗಳು-2) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 98, ದಿನಾಂಕ: 4.8.2000.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 42 ಸಸಿವಿ 2001, ದಿನಾಂಕ: 31.10.2001.
3. ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಆರ್ಥಿಕ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1133 ಸೇ-2:2001, ದಿನಾಂಕ: 25.5.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 4.8.2000ದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿ (ಸೇವೆಗಳು-2) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಉಪ ಕಾರ್ಯದರ್ಶಿ (ಸೇವೆಗಳು-2) ಎಂದು ಉನ್ನತೀಕರಿಸಲಾಗಿದ್ದಿತು. ನಂತರ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 31.10.2001ರ ಸರ್ಕಾರದ ಆದೇಶದಲ್ಲಿ ಈ ಹುದ್ದೆಯನ್ನು ದಿನಾಂಕ: 4.8.2001 ರಿಂದ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ ಅಥವಾ ಅಧಿಕಾರಿ ವೇತನ ಸಮಿತಿಯು ತನ್ನ ವರದಿಯನ್ನು ಸಲ್ಲಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದ್ದಿತು. ಪ್ರಸ್ತುತ ಈ ವಿಸ್ತರಿತ ಅವಧಿಯು ದಿನಾಂಕ: 3.8.2003ಕ್ಕೆ ಈಗಾಗಲೇ ಮುಕ್ತಾಯಗೊಂಡಿರುತ್ತದೆ.

ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 25.5.2004ರ ಅನಧಿಕೃತ ಟಿಪ್ಪಣಿಯಲ್ಲಿ ಉಪ ಕಾರ್ಯದರ್ಶಿ (ಸೇವೆಗಳು-2) ಆರ್ಥಿಕ ಇಲಾಖೆ ಇವರು ಅಧಿಕಾರಿ ವೇತನ ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿಯೂ ಕಾರ್ಯನಿರ್ವಹಿಸುತ್ತಿದ್ದು, ಈ ಸಮಿತಿಯ ಕಾರ್ಯವು ಇನ್ನೂ ಸಂಪೂರ್ಣಗೊಳ್ಳದೇ

ಇರುವುದರಿಂದ ಉಪ ಕಾರ್ಯದರ್ಶಿ (ಸೇವೆಗಳು-2) ಹುದ್ದೆಯನ್ನು ದಿನಾಂಕ: 4.8.2003 ರಿಂದ ಮುಂದಿನ ಎರಡು ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 44 ಸಸಿವಿ 2004, ಬೆಂಗಳೂರು, ದಿನಾಂಕ: 21ನೇ ಜೂನ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿ ಉನ್ನತೀಕರಿಸಲಾಗಿರುವ ಉಪ ಕಾರ್ಯದರ್ಶಿ (ಸೇವೆಗಳು-2) ಹುದ್ದೆಯನ್ನು ದಿನಾಂಕ: 4.8.2003 ರಿಂದ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ ಅಥವಾ ಅಧಿಕಾರಿ ವೇತನ ಸಮಿತಿಯು ತನ್ನ ವರದಿಯನ್ನು ಸಲ್ಲಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 718 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಜಲಸಂಪನ್ಮೂಲ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ: ಸನೀಇ 218 ಕೆಜಿದು 2004, ಬೆಂಗಳೂರು, ದಿನಾಂಕ: 1ನೇ ಜುಲೈ 2004**

ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಕೆಲವು ಯೋಜನೆ / ಕಾಮಗಾರಿಗಳನ್ನು ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸುವ / ವರ್ಗಾಯಿಸುವ ವಿಷಯದಲ್ಲಿ ಹೊರಡಿಸಲಾದ ಆದೇಶ ಸಂಖ್ಯೆ: ಸನೀಇ 218 ಕೆಜಿದು 2004, ದಿನಾಂಕ: 10.5.2004ರ ಆದೇಶ ಭಾಗದಲ್ಲಿ ನಮೂದಿತವಾಗಿರುವ ಷರತ್ತುಗಳಲ್ಲಿ ಕ್ರಮ ಸಂಖ್ಯೆ 3ರ ಷರತ್ತನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ್**

ಪಿ.ಆರ್. 719 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಶಿಕ್ಷಣ ಸಚಿವಾಲಯ**

**ವಿಷಯ:** ವಿದ್ಯಾ ವಿಕಾಸ ಯೋಜನೆಯಲ್ಲಿ ಶಾಲಾ ವಿದ್ಯಾರ್ಥಿಗಳಿಗೆ ಸಮವಸ್ತ್ರ ಪೂರೈಕೆಯನ್ನು 2004-05ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಸಾರ್ವಜನಿಕ ಶಿಕ್ಷಣ ಆಯುಕ್ತರವರ ಪ್ರಸ್ತಾವನೆ ಸಂಖ್ಯೆ: ಆ4(1)/ವಿವಿಯೋ. ಉ.ಸ.9/2003-04, ದಿ: 21.4.2004.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆ ವ್ಯಾಪ್ತಿಗೆ ಸಂಬಂಧಿಸಿದಂತೆ ಸರ್ಕಾರವು ಹಮ್ಮಿಕೊಂಡಿರುವ ಹಲವಾರು ಪ್ರೋತ್ಸಾಹದಾಯಕ ಕಾರ್ಯಕ್ರಮಗಳಲ್ಲಿ ಸರ್ಕಾರ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಶಾಲಾ ವಿದ್ಯಾರ್ಥಿ/ವಿದ್ಯಾರ್ಥಿನಿಯರಿಗೆ ಉಚಿತ ಸಮವಸ್ತ್ರ ಒದಗಿಸುವ ಕಾರ್ಯಕ್ರಮವೂ ಒಂದಾಗಿದ್ದು, ಈ ಕಾರ್ಯಕ್ರಮವನ್ನು 2004-05ನೇ ಶೈಕ್ಷಣಿಕ ಸಾಲಿನಲ್ಲಿ ಮುಂದುವರೆಸಲು ಮೇಲೆ ಓದಲಾದ ದಿನಾಂಕ: 21.4.2004ರ ಪತ್ರದಲ್ಲಿ ಸಾರ್ವಜನಿಕ ಶಿಕ್ಷಣ ಆಯುಕ್ತರು ಪ್ರಸ್ತಾವನೆ ಸಲ್ಲಿಸಿದ್ದು, ಅದನ್ನು ಸರ್ಕಾರದ ಮಟ್ಟದಲ್ಲಿ ವಿವರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 59 ಯೋಯೋಕಾ 2004, ಬೆಂಗಳೂರು, ದಿನಾಂಕ: 3ನೇ ಜುಲೈ 2004**

**(ಇಡಿ 28 ಸ್ಕೀಮರ (ಯೂನಿಕ್) 2004, ದಿನಾಂಕ: 03.7.2004)**

1. 2004-05ನೇ ಸಾಲಿನಲ್ಲಿ ಹಿಂದಿನ ಸಾಲಿನಂತೆ ವಿದ್ಯಾವಿಕಾಸ ಯೋಜನೆಯಡಿಯಲ್ಲಿ ಸರ್ಕಾರಿ ಶಾಲೆಗಳಲ್ಲಿ ಒಂದರಿಂದ ಏಳನೆಯ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ಮಕ್ಕಳಿಗೆ ಮತ್ತು ಎಂಟರಿಂದ ಹತ್ತನೇ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಲ್ಲಾ ಹೆಣ್ಣು ಮಕ್ಕಳಿಗೆ ಉಚಿತ ಸಮವಸ್ತ್ರದ ಬಟ್ಟೆ ಒದಗಿಸುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಸಾರ್ವಜನಿಕ ಶಿಕ್ಷಣ ಆಯುಕ್ತರಿಗೆ ಸರ್ಕಾರವು ಮಂಜೂರಾತಿ ನೀಡಿದೆ.

2. ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮಗಳ ಮೂಲಕ 75:25ರ ಅನುಪಾತದಲ್ಲಿ ಅಗತ್ಯ ಬಟ್ಟೆಗಳ ಸರಬರಾಜು ಆದೇಶವನ್ನು ಹಂಚುವುದು.

3. ಹೊಲಿಗೆಗೆ ಸಂಬಂಧಿಸಿದ ಯಾವುದೇ ಬಟ್ಟೆಯ ವೆಚ್ಚವನ್ನು ಇದರಡಿ ಭರಿಸಬಾರದು ಎಂದೂ ಬೆಂಗಳೂರಿನ ಸಾರ್ವಜನಿಕ ಶಿಕ್ಷಣ ಆಯುಕ್ತರಿಗೆ ಸೂಚಿಸಿದೆ.

4. ಸದರಿ ಎರಡು ಸರಬರಾಜು ಸಂಸ್ಥೆಗಳಿಗೆ ಸರಬರಾಜು ಮಾಡುವ ಬಟ್ಟೆಯ ಪ್ರಮಾಣ ನಿಗದಿಪಡಿಸುವ ಮೊದಲಿಗೆ ಇಲಾಖೆಯ ಜಿಲ್ಲಾ/ತಾಲ್ಲೂಕು/ಶಾಲಾ ವ್ಯಾಪ್ತಿಯಲ್ಲಿ ಹಿಂದಿನ ವರ್ಷಗಳ ದಾಸ್ತಾನು ಇದ್ದಲ್ಲಿ ಅವುಗಳನ್ನು ಕಳೆದು ಅಗತ್ಯವಿರುವಷ್ಟು ಬಟ್ಟೆಗೆ ಮಾತ್ರ ಸರಬರಾಜು ಆದೇಶವನ್ನು ಸಾರ್ವಜನಿಕ ಶಿಕ್ಷಣ ಆಯುಕ್ತರು, ಬೆಂಗಳೂರು ಇವರು ನೀಡತಕ್ಕದ್ದು.

5. ಈ ಕಾರ್ಯಕ್ರಮದ ಅನುಷ್ಠಾನದಲ್ಲಿ ಇರುವ ಕೊರತೆಗಳ ಬಗ್ಗೆ ಮೌಲ್ಯಮಾಪನ ವರದಿಯಲ್ಲಿ ಎತ್ತಿರುವ ಅಂಶಗಳನ್ನು ಆದ್ಯತೆಯ ಮೇಲೆ ಪರಿಶೀಲಿಸಿ ಎಲ್ಲಾ ನಿವಾರಕ ಕ್ರಮಗಳನ್ನು ಕೈಗೊಳ್ಳುವುದರ ಜೊತೆಗೆ ಸದರಿ ಸರಬರಾಜು ಸಂಸ್ಥೆಗಳು ಸರಬರಾಜು ಮಾಡುವ ಬಟ್ಟೆಗಳ ಗುಣಮಟ್ಟವನ್ನು ಖಾತರಿಪಡಿಸಿಕೊಳ್ಳತಕ್ಕದ್ದು.

6. ಈ ಕಾರ್ಯಕ್ರಮಕ್ಕೆ ಸಂಬಂಧಿಸಿದ ವೆಚ್ಚಗಳನ್ನು ಭರಿಸುವ ಬಗ್ಗೆ ಪ್ರತ್ಯೇಕ ಆದೇಶವನ್ನು ಹೊರಡಿಸಲಾಗುವುದು.

7. ಸಾರ್ವಜನಿಕ ಶಿಕ್ಷಣ ಆಯುಕ್ತರು ಸಮವಸ್ತ್ರಗಳ ಸರಬರಾಜು ಪ್ರಗತಿ ವರದಿಯನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸತಕ್ಕದ್ದು.

8. ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಅ.ಟಿ.ಸಂಖ್ಯೆ: ಅಮುಕಾ ಹಾಗೂ ಪ್ರ.ಕಾ ಆಇ 2956, ದಿನಾಂಕ: 30.6.2004 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ್**

ಪಿ.ಆರ್. 720

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ವಿಷಯ:** ಡಾ: ಎ.ಎಂ. ಬಾಬು ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ವಿಜ್ಞಾನ ಕಾಲೇಜು, ಬೆಂಗಳೂರು - ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:**
1. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಸಿಸಿಇ 94 ಎಸ್‌ಎಲ್ 97, ಆಂತರಿಕ ದಿನಾಂಕ: 04/14.3.2002.
2. ಕಾರಣ ಕೇಳುವ ನೋಟೀಸು ದಿನಾಂಕ: 24.4.2003.
3. ದಿನಾಂಕ: 16.10.2003ರ ಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ:**

ಡಾ: ಎ.ಎಂ. ಬಾಬು ಭೌತಶಾಸ್ತ್ರ ಉಪನ್ಯಾಸಕರು ಸರ್ಕಾರಿ ವಿಜ್ಞಾನ ಕಾಲೇಜು, ಬೆಂಗಳೂರು ಇವರು ಜರ್ಮನಿಯ (ಎಯುಹೆಚ್) ದಲ್ಲಿ 1998-99ನೇ ಸಾಲಿನಲ್ಲಿ ಫಿಲೋಷಿಪ್ ಪಡೆಯಲು 6.7.98 ರಿಂದ 31.8.99 ರವರೆಗೆ ವ್ಯಾಸಂಗ ರಜೆ ಮಂಜೂರು ಮಾಡುವಂತೆ ಕೋರಿದ್ದು, ಸದರಿ ರಜೆ ಮಂಜೂರಾಗಿಲ್ಲದೇ ಇದ್ದು, ಆದಾಗ್ಯೂ ಸದರಿಯವರು ದಿನಾಂಕ: 3.7.98 ರಿಂದ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದಾಗಿ ಮೇಲ್ಕಂಡ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 04/14.3.2002ರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ವರದಿ ಮಾಡಿದ್ದರು. ಇದರನ್ವಯ ಡಾ: ಎ.ಎಂ. ಬಾಬು ಅವರಿಗೆ ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 24.4.2003 ರಲ್ಲಿ ಅವರ ವಿರುದ್ಧದ ಆರೋಪಗಳ ಬಗ್ಗೆ ಶಿಸ್ತುಕ್ರಮದ ನಡವಳಿಗಳನ್ನು ಪ್ರಾರಂಭಿಸುವ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ಮತ್ತು ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಡಿಯಲ್ಲಿ ದೋಷಾರೋಪಣಾ ಪಟ್ಟಿಯನ್ನು ತಿಳುವಳಿಕೆ ಪತ್ರದೊಂದಿಗೆ ಜಾರಿ ಮಾಡಲು ಕಳುಹಿಸಲಾಗಿತ್ತಾದರೂ ಅದು ಸ್ವೀಕೃತವಾಗದೆ ವಾಪಸ್ಸು ಬಂದಿದ್ದು ಹಾಗೂ ಅವರಿಂದ ಯಾವುದೇ ಪ್ರತಿಕ್ರಿಯೆ ಬಾರದ ಕಾರಣ ಸರ್ಕಾರವು ಜನಪ್ರಿಯ ಪತ್ರಿಕೆಗಳಾದ ಉದಯವಾಣಿ ಮತ್ತು ಸಂಜೆವಾಣಿಯಲ್ಲಿ ಮೇಲೆ ದಿನಾಂಕ: 16.10.2003 ರಲ್ಲಿ ಅನಧಿಕೃತ ಗೈರು ಹಾಜರಿಯ ಪ್ರಕಟಣೆ ನೀಡಿ ಕೆ.ಸಿ.ಎಸ್.ಆರ್. ನಿಯಮ 108 ಹಾಗೂ ಸಿ.ಸಿ.ಎ. ನಿಯಮ 14ರ ರೀತ್ಯಾ ಅದೇ ನಿಯಮಾವಳಿಯ ನಿಯಮ 8(viii)ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಬಾರದೇಕೆ ಎಂದು ಅಂತಿಮವಾಗಿ ಎಚ್ಚರಿಸಲಾಯಿತು. ಈ ಎಲ್ಲಾ ಪ್ರಕ್ರಿಯೆಗಳು ಜರುಗಿದ್ದಾಗ್ಯೂ ಡಾ: ಎ.ಎಂ. ಬಾಬು ಅವರಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ ಹಾಗೂ ಅವರ ಬಗ್ಗೆ ಯಾವುದೇ ಮಾಹಿತಿ ತಿಳಿಯದ ಕಾರಣ ಅವರಿಗೆ ಸರ್ಕಾರಿ ಸೇವೆಯಲ್ಲಿ ಆಸಕ್ತಿ ಇಲ್ಲದಿರುವುದು ದೃಢಪಟ್ಟಿ ಇರುವುದರಿಂದ ಅವರ ವಿರುದ್ಧ ವಿಚಾರಣೆ ನಡೆಸದೆ ದಂಡನೆಯನ್ನು ವಿಧಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಗಳ 1958ರ ನಿಯಮ 108ರ ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14 ಹಾಗೂ ಅದೇ ನಿಯಮಾವಳಿಯ ನಿಯಮ 8(viii) ರಡಿಯಲ್ಲಿ ಡಾ: ಎ.ಎಂ.ಬಾಬು ಭೌತಶಾಸ್ತ್ರ ಉಪನ್ಯಾಸಕರು ಇವರನ್ನು ಸೇವೆಯಿಂದ ವಜಾಗೊಳಿಸಲು ಸರ್ಕಾರವು ಉದ್ದೇಶಿಸಿ, ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 21 ಡಿಸಿಇ 2003, ಬೆಂಗಳೂರು, ದಿನಾಂಕ: 1ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಡಾ: ಎ.ಎಂ. ಬಾಬು ಭೌತಶಾಸ್ತ್ರ ಉಪನ್ಯಾಸಕರು ಸರ್ಕಾರಿ ವಿಜ್ಞಾನ ಕಾಲೇಜು, ಬೆಂಗಳೂರು ಇವರು ದಿನಾಂಕ: 3.7.98 ರಿಂದ ಈವರೆವಿಗೆ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿದ್ದಕ್ಕಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 108ನ್ನು ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14ರ ರೀತ್ಯ ಹಾಗೂ 8(viii) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತೆ ಸರ್ಕಾರಿ ನೌಕರಿಯ ಪ್ರವೇಶಕ್ಕೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಡಾ: ಎ.ಎಂ. ಬಾಬು ಅವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 721

ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ವಸತಿ ಯೋಜನೆಯನ್ನು ಅಭಿವೃದ್ಧಿಗೊಳಿಸಲು ಅಂತಿಮ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ನಗರ ಯೋಜನಾ ಇಲಾಖೆ, ಇವರ ಏಕ ಕಡತ ಸಂಖ್ಯೆ: ನಯೋ.13.113.ಭೂಉಬ.2002, ದಿನಾಂಕ: 28.3.2003.
2. ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ: ನಪ್ರಾರಾ.ವಸತಿ.ಯೋಜನೆ-2:2002-03:85, ದಿನಾಂಕ: 30.4.2002.

**ಪ್ರಸ್ತಾವನೆ:**

ರಾಯಚೂರು ಜಿಲ್ಲೆ, ರಾಯಚೂರು ಗ್ರಾಮ ಸಂಖ್ಯೆ ನಂ.1156(ಭಾಗ) 1157, 1158, 1160 ಮತ್ತು 1161 ರಲ್ಲಿರುವ ಜಮೀನಿನಲ್ಲಿ 37 ಎಕರೆ 28 ಗುಂಟೆ ಪ್ರದೇಶದಲ್ಲಿ ಭೂಸ್ವಾಧೀನಪಡಿಸಿಕೊಳ್ಳುವ ಬಗ್ಗೆ ಸರ್ಕಾರದ ಅಂತಿಮ ಆಡಳಿತಾತ್ಮಕ ಮಂಜೂರಾತಿಯನ್ನು ಕೋರಿರುತ್ತಾರೆ. ಈ ಪ್ರದೇಶದಲ್ಲಿ ವಸತಿ ಯೋಜನೆಯನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಿದ್ದರೂ, 2.08 ಕೋಟಿ ಅಂದಾಜು ಮೊತ್ತದಲ್ಲಿ ವಿವಿಧ ಅಳತೆಯ 655 ನಿವೇಶನಗಳನ್ನು ರಚಿಸಲು ಪ್ರಸ್ತಾಪಿಸಲಾಗಿದೆ. ಈ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 90 ಗುಅಪ್ರಾ 2001, ದಿನಾಂಕ: 31.7.2001 ರಲ್ಲಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987 ಕಲಂ 15(1) (ಬಿ) ರನ್ವಯ ಸರ್ಕಾರದ ಪ್ರಾಥಮಿಕ ಅನುಮೋದನೆಯನ್ನು ನೀಡಲಾಗಿದೆ. ಈ ಯೋಜನೆಗೆ ಕರ್ನಾಟಕ ನಗರಾಭಿವೃದ್ಧಿ ಕಾಯ್ದೆ 1987 ಕಲಂ 18(3) ರನ್ವಯ ವಸತಿ ಯೋಜನೆಗಾಗಿ ಕೈಗೆತ್ತಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಪ್ರಾಧಿಕಾರವು ಕೋರಿದ್ದು ಈ ಬಗ್ಗೆ ಉಲ್ಲೇಖ (1) ರಲ್ಲಿ ನಗರ ಯೋಜನಾ ನಿರ್ದೇಶಕರು ತಮ್ಮ ಅಭಿಪ್ರಾಯ ನೀಡಿರುತ್ತಾರೆ.

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 90 ಗುಅಪ್ರಾ 2001, ಬೆಂಗಳೂರು, ದಿನಾಂಕ: 30ನೇ ಜೂನ್ 2004**

ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರವು ರಾಯಚೂರು ಗ್ರಾಮ ಸ.ನಂ.1156(ಭಾಗ), 1157, 1158, 1160, 1161 ರಲ್ಲಿ 37 ಎಕರೆ 28 ಗುಂಟೆ ಜಮೀನಿನಲ್ಲಿ ಅಂದಾಜು ವೆಚ್ಚ ರೂ.2.08 ಕೋಟಿ ವೆಚ್ಚದಲ್ಲಿ ವಸತಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 18(3) ರನ್ವಯ ಸರ್ಕಾರದ ಅನುಮೋದನೆಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನೀಡಲಾಗಿದೆ.

ಅ) ನಿವೇಶನಗಳ ಹಂಚಿಕೆ ಸಮೀಕ್ಷೆ ನಡೆಸಿ ಅಗತ್ಯ ಬೇಡಿಕೆ ಮನವಿಗಳು ಬಂದಲ್ಲಿ ಮಾತ್ರ ಯೋಜನೆಯನ್ನು ಕೈಗೊಳ್ಳತಕ್ಕದ್ದು.

ಆ) ಪ್ರಸ್ತಾಪಿತ ಯೋಜನೆಯಲ್ಲಿ ವಿವಿಧ ಕಾಮಗಾರಿಗಳಿಗೆ ತಯಾರಿಸಲಾಗಿರುವ ಅಂದಾಜು ಪಟ್ಟಿಗೆ ಸಂಬಂಧಿಸಿದ ಪ್ರಾಧಿಕಾರಗಳಿಂದ ಅಗತ್ಯ ಅನುಮೋದನೆ ಪಡೆಯತಕ್ಕದ್ದು.

ಇ) ಸದರಿ ಯೋಜನೆಗೆ ತಗಲುವ ವೆಚ್ಚವನ್ನು ನಿರೀಕ್ಷಿಸಿದ ಆದಾಯಕ್ಕೆ ಪ್ರಾಧಿಕಾರದ ಸಭೆಯಲ್ಲಿ ಒಪ್ಪಿಗೆ ಪಡೆದುಕೊಳ್ಳತಕ್ಕದ್ದು.

ಈ) ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಕಲಂ 19(5) ರನ್ವಯ ಯೋಜನೆಯ ಅಂದಾಜು ಒಟ್ಟು ವೆಚ್ಚದಲ್ಲಿ ಶೇ.5 ಕ್ಕಿಂತ ಹೆಚ್ಚಾದಲ್ಲಿ ಸದರಿ ಮಾರ್ಪಡಿತ ವೆಚ್ಚಕ್ಕೆ ಸರ್ಕಾರದ ಅನುಮೋದನೆ ಪಡೆಯತಕ್ಕದ್ದು.

ಉ) ಪ್ರಾಧಿಕಾರವು ಸರ್ಕಾರದಿಂದ ಯಾವುದೇ ಧನ ಸಹಾಯವನ್ನು ಮತ್ತು ಗ್ಯಾರೆಂಟಿಯನ್ನು ಕೋರತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಪಿ.ಆರ್. 722 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಮೈಸೂರು ನಗರ ಮತ್ತು ಶ್ರೀರಂಗಪಟ್ಟಣವನ್ನು ಪಾರಂಪರಿಕ ನಗರವೆಂದು ಪರಿಗಣಿಸಲು ರೂ.85.00 ಲಕ್ಷ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರ ಪತ್ರ ಸಂಖ್ಯೆ: ಅಪ್ರಾಸಂಪ:ಇಸಿಟಿ:2003-04, ದಿನಾಂಕ: 10.3.2004.

2. ಸರ್ಕಾರದ ಆದೇಶ ಸಂಖ್ಯೆ: ಸಂಕಇ 10 ಕೆಎಂಯು 2004, ದಿನಾಂಕ: 21.6.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರ-1 ರಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರು ಮೈಸೂರು ಮತ್ತು ಶ್ರೀರಂಗಪಟ್ಟಣವನ್ನು ಪಾರಂಪರಿಕ ನಗರವೆಂದು ಪರಿಗಣಿಸಲು ರೂ.2 ಕೋಟಿ ಅನುದಾನ ಬಿಡುಗಡೆ ಮಾಡಬೇಕೆಂದು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ದಿನಾಂಕ: 21.6.2004 ರಂದು ಆದೇಶವನ್ನು ಹೊರಡಿಸಿದೆ. ಉಲ್ಲೇಖ-2 ರಲ್ಲಿ ಕಾಣಿಸಿದ ಈ ಆದೇಶವನ್ನು ಕೆಲವು ತಾಂತ್ರಿಕ ಕಾರಣಗಳಿಂದ ಪರಿಷ್ಕರಿಸಬೇಕಾಗಿರುತ್ತದೆ.

ಆದ್ದರಿಂದ ಈ ಕೆಳಕಂಡಂತೆ ಪರಿಷ್ಕೃತ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 10 ಕೆಎಂಯು 2004, ಬೆಂಗಳೂರು, ದಿನಾಂಕ: 2ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮೈಸೂರು ನಗರ ಮತ್ತು ಶ್ರೀರಂಗಪಟ್ಟಣವನ್ನು ಪಾರಂಪರಿಕ ನಗರಗಳಾಗಿ ಅಭಿವೃದ್ಧಿಗೊಳಿಸಲು ಈ ಕೆಳಕಂಡಂತೆ ಅನುದಾನವನ್ನು ಆಯುಕ್ತರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು, ಇವರಿಗೆ ಬಿಡುಗಡೆ ಮಾಡಲಾಗಿದೆ.

1. ಪರಂಪರೆ ಕಟ್ಟಡಗಳ ಸ್ವಚ್ಛತೆ ಹಾಗೂ ರಕ್ಷಣೆಯ ಪ್ರಚಾರಣೆಗೆ ರೂ.5.00 ಲಕ್ಷ ಲೆಕ್ಕ ಶೀರ್ಷಿಕೆ (2205-00-103-0-21-059)

2. ಆಯ್ಕೆಗೊಂಡಿರುವ ಪಾರಂಪರಿಕೆ ಕಟ್ಟಡಗಳ ರಕ್ಷಣೆ ಹಾಗೂ ಸಂರಕ್ಷಣೆಗೆ ರೂ.50.00 ಲಕ್ಷ ಲೆಕ್ಕ ಶೀರ್ಷಿಕೆ (2205-00-103-0-22-059)

3. ಆಡಳಿತಾತ್ಮಕ ವೆಚ್ಚ, ಮೂಲಭೂತ ಸೌಲಭ್ಯ, ವಾಹನಗಳು ಕಛೇರಿ ವೆಚ್ಚ, ವೇತನ ಮತ್ತು ತರಬೇತಿ ಹಾಗೂ ಪಾರಂಪರಿಕ ಕಟ್ಟಡ ಗುರುತಿಸಲು ರೂ.30.00 ಲಕ್ಷ ಲೆಕ್ಕ ಶೀರ್ಷಿಕೆ (2205-00-103-0-23-059)

